# ತಾಯಿ ತಂದೆ

ತಂದೆ

↓

ತಾಯಿ

ತಾಯಿ ತಂದೆ

ಶರೀರ

ಜೀವಾತ್ಮ

ಆತ್ಮ


ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು





# ತಾಯಿ ತಂದೆ

ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

## ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**




ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 50/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಟಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ತಾಯಿ ತಂದೆ



ತಾಯಿ ತಂದೆ ಎನ್ನುವ ಮಾತನ್ನು ತಿಳಿಯದವನೇ ಇಲ್ಲವೆಂದು ಕೊಳ್ಳುತ್ತೇನೆ. ಆದರೆ ತಾಯಿ ತಂದೆ ಎಂದರೆ ಯಾರೋ ತಿಳಿದವರೆಷ್ಟು ಎಂಬ ಪ್ರಶ್ನೆ ಬಂದರೆ, ನನ್ನ ದೃಷ್ಠಿಯಲ್ಲಿ ಉತ್ತರ ಸ್ವಲ್ಪ ಕಷ್ಟವಾಗಿ ಇರುತ್ತದೆ. ಇದೇನು ಪ್ರಶ್ನೆ? ತಾಯಿ ತಂದೆಯರನ್ನು ತಿಳಿಯದವರೂ ಇರುತ್ತಾರಾ? ಎಂದು ಬಹಳ ಜನ ಅನ್ನಬಹುದು. ಇಲ್ಲೇ ನಮಗೆ ತಿಳಿಯದ ವಿಷಯ ಎಷ್ಟೋ ಇದೆ ಎಂದು ಹೇಳುತ್ತೇವೆ. ಇಲ್ಲಿಯವರೆಗೂ ಮನುಷ್ಯರಿಗೆ ಎಷ್ಟು ತಿಳಿದಿದೆ, ತಿಳಿಯದಿರುವುದು ಎಷ್ಟಿದೆ ಎಂದು ವಿವರಿಸಿಕೊಂಡರೆ, ಮನುಷ್ಯನಿಗೆ ತಿಳಿದಿರುವುದಕ್ಕಿಂತ ತಿಳಿಯದೇ ಇರುವುದು ಎಷ್ಟೋ ಇದೆ ಎಂದು ಹೇಳಬಹುದು. ಇಲ್ಲಿಯವರೆಗೆ ನಮಗೆ ತಿಳಿದಿದ್ದನ್ನು ಕುರಿತು ಹೇಳಿಕೊಂಡಿದ್ದೇವೆ. ಒಬ್ಬ ಮನುಷ್ಯ ಹುಟ್ಟಿದ್ದಾನೆಂದರೆ ಆತನಿಗೆ ತಾಯಿ ತಂದೆ ತಪ್ಪದೇ ಇರಬೇಕಾಗಿರುತ್ತದೆ. ವಿಜ್ಞಾನದ ಪ್ರಕಾರ ಒಬ್ಬ ಸ್ತ್ರೀಯ ಗರ್ಭಾಶಯದಲ್ಲಿ ಅಂಡಾಶಯ ಎನ್ನುವ ರಜೋಕಣ ದೊಂದಿಗೆ, ಪುರುಷನ ವೀರ್ಯಕಣವು ಸೇರಿದಾಗ ಸ್ತ್ರೀಗೆ ಗರ್ಭವು ಏರ್ಪಟ್ಟು, ಆ ಗರ್ಭದಲ್ಲಿ ಶಿಶುವು ಒಂಬತ್ತು ತಿಂಗಳು ಬೆಳೆದು, ಹತ್ತನೇ ತಿಂಗಳಲ್ಲಿ ಪ್ರಸವವಾಗುತ್ತದೆ ಎಂದು ವಿಜ್ಞಾನಿಗಳು, ಭೌತಿಕ ಶಾಸ್ತ್ರಜ್ಞರು ಹೇಳುತ್ತಾರೆ. ಹಾಗೆ ಹುಟ್ಟಿದ ಶಿಶುವಿಗೆ ಆತನನ್ನು ಪ್ರಸವಿಸಿದ ಸ್ತ್ರೀ ತಾಯಿಯೆಂದು, ಆ ಸ್ತ್ರೀ ಗರ್ಭಕ್ಕೆ ವೀರ್ಯಕಣವನ್ನು ಒದಗಿಸಿದ ಪುರುಷನನ್ನು ತಂದೆಯೆಂದು ಹೇಳುವುದು ರೂಢಿಯಲ್ಲಿದೆ. ಇದು ಪ್ರಪಂಚಕ್ಕೆ ತಿಳಿದ ಸತ್ಯ. ಸಮಾಜದಲ್ಲಿ ಒಬ್ಬ ಸ್ತ್ರೀ ಹೆಂಡತಿಯಾಗಿದ್ದು, ಗಂಡನಾಗಿ ಪುರುಷನಿದ್ದಾನೆ. ಸ್ತ್ರೀ ಪುರುಷರು ಇಬ್ಬರೂ ಗಂಡ ಹೆಂಡತಿಯಾಗಿದ್ದೂ, ಅವರಿಗೆ ಬೆಳೆದ ಸಂತಾನಕ್ಕೆ ತಾಯಿ ತಂದೆಯಾಗಿ ವ್ಯವಹರಿಸುತ್ತಾರೆ.

ಸಮಾಜದಲ್ಲಿ ಯಾವುದೇ ಮನುಷ್ಯನನ್ನಾಗಲಿ ನಿನ್ನ ತಾಯಿ ತಂದೆ ಯಾರು ಎಂದು ಪ್ರಶ್ನಿಸಿದರೇ ಆತನು ತಡಬಡಿಸದೇ ತನ್ನ ತಾಯಿ ತಂದೆಯ ಹೆಸರನ್ನು ಹೇಳುತ್ತಾನೆ. ಯಾವುದೇ ಅಪ್ಲಿಕೇಷನ್ ಫಾರಂನಲ್ಲಿಯಾದರೂ ಪೇರೆಂಟ್ಸ್ ಅಂತ ಇದ್ದ ಜಾಗದಲ್ಲಿ ಒಬ್ಬ ಸ್ತ್ರೀ ಹೆಸರನ್ನು ತಾಯಿ ಸ್ಥಾನದಲ್ಲಿ,

ಒಬ್ಬ ಪುರುಷನ ಹೆಸರನ್ನು ತಂದೆ ಸ್ಥಾನದಲ್ಲಿ ಬರೆಯುತ್ತಾರೆ. ತಾಯಿ ತಂದೆ ಸಜೀವವಾಗಿ ಇದ್ದರೂ, ಅಥವಾ ಸತ್ತುಹೋಗಿ ಬಹಳ ಕಾಲವಾದರೂ, ಮನುಷ್ಯ ತನ್ನ ತಂದೆ ತಾಯಿಯ ಹೆಸರುಗಳನ್ನೆ ಹೇಳುತ್ತಾನೆ. ಆದರೆ ತಾಯಿ ತಂದೆಯ ವಿಷಯದಲ್ಲಿ ಯಾವ ಗೊಂದಲ ಬೀಳುವುದಿಲ್ಲ. ಮನುಷ್ಯ ಸಾಯುವವರೆಗೂ ತನ್ನ ತಾಯಿಯ ಹೆಸರಾಗಲಿ, ತಂದೆಯ ಹೆಸರಾಗಲಿ ಮರೆಯುವುದಿಲ್ಲ. ಪ್ರಪಂಚದಲ್ಲಿ ಪ್ರತಿ ಮನುಷ್ಯನಿಗೂ ಹತ್ತಿರ ಸಂಬಂಧ ಇರುವವರು ತಾಯಿ ತಂದೆ. ಒಬ್ಬ ಮನುಷ್ಯ ಕಷ್ಟದಲ್ಲಿರುವಾಗಾಗಲೀ, ಅಪಾಯಕ್ಕೆ ಗುರಿಯಾದಾಗಾಗಲೀ, ಸತ್ತುಹೋದಾಗಾಗಲೀ ಆತನನ್ನು ಕುರಿತು ಎಲ್ಲರಿಗಿಂತ ಹೆಚ್ಚಾಗಿ ನೋವು ಬೀಳುವವರು ತಾಯಿ ತಂದೆಯರೆಂದೇ ಹೇಳಬಹುದು. ಇವನು ನನ್ನ ಮಗ ಎಂದು ತಾಯಿ ತಂದೆಗಿದ್ದಷ್ಟು ಪ್ರೇಮ, ಇವರು ನಮ್ಮ ತಾಯಿ ತಂದೆ ಎಂದು ಮಗನಿಗೂ ಉಂಟು. ಇದು ಯಾವಾಗಲೂ ಪ್ರಪಂಚದಲ್ಲಿರುವ ಪದ್ಧತಿ. ಈ ಪದ್ಧತಿ ಯಾವ ಜ್ಞಾನವಿಲ್ಲದ ಮನುಷ್ಯನಿಗಾದರೂ ಇರುತ್ತದೆ. ಎಲ್ಲಾ ವಿಷಯಗಳಲ್ಲಿ ಬುದ್ಧಿ ಕಡಿಮೆ ಇರುವವನಾದರೂ ತಾಯಿತಂದೆಯರನ್ನು ಗುರುತಿಸಬಲ್ಲನು, ಅವರನ್ನು ಮರೆಯುವುದಿಲ್ಲ. ಈ ವಿಧವಾಗಿ ಪ್ರಪಂಚದಲ್ಲಿ ತಾಯಿ ತಂದೆಗೆ ಅವರ ಸಂತಾನಕ್ಕೆ ಅನುಬಂಧ ಏರ್ಪಟ್ಟಿದೆ. ಈ ಬಂಧವನ್ನು ಯಾರೂ ಕಿತ್ತು ಹಾಕಲಾರರು.

ಹೊರಸಮಾಜದಲ್ಲಿ ಇನ್ನೂ ಕೆಲವರು ತಾಯಿ ತಂದೆಯರನ್ನು ಬಹಳ ಪೂಜ್ಯ ಭಾವನೆಯಿಂದ ನೋಡುತ್ತಾರೆ. ತಾಯಿ ತಂದೆಯನ್ನು ದೈವವಾಗಿ ಭಾವಿಸಿ ಪೂಜಿಸುವವರು ಸಹಾ ಇದ್ದಾರೆ. ಅವರ ಲೆಕ್ಕ ಪ್ರಕಾರ ಪೂಜ್ಯಸ್ಥಾನದಲ್ಲಿ ಮೊದಲ ಸ್ಥಾನ ತಾಯಿ ಎಂದೂ, ಎರಡನೆಯ ಸ್ಥಾನ ತಂದೆಯೆಂದೂ, ಮೂರನೆಯವನು ಗುರುವು ಎಂದೂ, ನಾಲ್ಕನೆಯವನು ದೇವರೆಂದು ಹೇಳುತ್ತಿರುವರು. ಅಂತಹವರ ಭಾವನೆಯಲ್ಲಿ ತಂದೆಗಿಂತ ತಾಯಿ ಪೂಜ್ಯ ವಾದವಳು ಎಂದೂ, ತಾಯಿ ತಂದೆ ನಂತರ ಗುರುವೆಂದು, ಗುರುನಂತರ ದೇವರೆಂದು ಹೇಳುತ್ತಿರುವರು. ನೋಡಿದಿರಾ ಇವರ ಲೆಕ್ಕದಲ್ಲಿ ದೇವರೇ

ಕೊನೆಯದವನಾಗಿ ಹೋಗಿದ್ದಾನೆ. ಮತ್ತೆ ಕೆಲವರು ಮಾತೃದೇವೋಭವಃ, ಪಿತೃದೇವೋಭವಃ, ಆಚಾರ್ಯ ದೇವೋಭವಃ ಅಂತ ಅನ್ನುತ್ತಾ ಕೊನೆಗೆ ದೇವರನ್ನು ಪೂರ್ತಿಯಾಗಿ ಬಿಟ್ಟಿದ್ದಾರೆ. ಈ ಮೂವರನ್ನು ಪೂಜಿಸಿದರೆ ಸಾಕು ಎನ್ನುತ್ತಾರೆ. ಕೆಲವರಾದರೆ ತಾಯಿ ತಂದೆಯನ್ನು ಮೀರಿದ ದೈವವಿಲ್ಲ ಎಂದು ಮುಂಜಾನೆ ಎದ್ದ ಕೂಡಲೇ ತಾಯಿ ತಂದೆಯ ಪಾದಗಳಿಗೆ ನಮಸ್ಕರಿಸು ವವರು ಸಹ ಕೆಲವರು ಇದ್ದಾರೆ. ಈ ವಿಧವಾಗಿ ತಾಯಿ ತಂದೆ ಎನ್ನುವವರು ಸಮಾಜದಲ್ಲಿ ಪ್ರತ್ಯೇಕ ಸ್ಥಾನದಲ್ಲಿ ಇದ್ದರೂ, ಕೆಲವರ ದೃಷ್ಟಿಯಲ್ಲಿ ಮಾತ್ರ ದೈವ ಸಮಾನವಾಗಿ ಇದ್ದಾರೆ.

ತಾಯಿ ತಂದೆ ಪವಿತ್ರ ಭಾವದಿಂದ ಇರುವವರಾದರೂ ಕೆಲವರಲ್ಲಿ ಆ ಪವಿತ್ರತೆ ಇಲ್ಲದೆ ಹೋಗುತ್ತಿದೆ. ತಾಯಿ ತಂದೆಯರು ತಮ್ಮ ಮಕ್ಕಳ ಹತ್ತಿರ ಅತಿ ಕಿರಾತಕವಾಗಿ ಪ್ರವರ್ತಿಸುವವರೂ ಇದ್ದಾರೆ. ಅದೇ ವಿಧವಾಗಿ ತಾಯಿ ತಂದೆಯರು ಒಳ್ಳೆಯವರಾದರೂ ಅವರ ಮಕ್ಕಳು ತಾಯಿ ತಂದೆಯರ ಬಳಿ ಅಮಿತ ದುಷ್ಟರಾಗಿ ಪ್ರವರ್ತಿಸುವವರೂ ಇರುವರು. ಮಕ್ಕಳು ಒಳ್ಳೆಯವರಾದರೂ ತಾಯಿ ತಂದೆಯರು ಮಕ್ಕಳ ಮೇಲೆ ಕಿರಾತಕವಾಗಿ ಪ್ರವರ್ತಿಸುವವರು ಬಹಳ ಕಡಿಮೆ ಇರುತ್ತಾರೆ. ಆದರೆ ತಾಯಿ ತಂದೆಯರು ಒಳ್ಳೆಯವರಾದರೂ ಮಕ್ಕಳು ಅವರ ಬಳಿ ದುಷ್ಟರಾಗಿ ಪ್ರವರ್ತಿಸುವವರು ಬಹಳ ಜನ ಇದ್ದಾರೆಂದು ಹೇಳಬಹುದು. ತಾಯಿ ತಂದೆ ಮಕ್ಕಳನ್ನು ಎಷ್ಟೋ ಪ್ರೇಮದಿಂದ ಬೆಳೆಸುವುದು ಪ್ರಕೃತಿ ಸಿದ್ದ ಎಂದು ಹೇಳಬಹುದು. ತಮಗಿರುವುದರಲ್ಲಿ ತಮ್ಮ ಮಕ್ಕಳನ್ನು ಒಳ್ಳೆಯದಾಗಿ ಬೆಳೆಸಿ, ವಿದ್ಯಾ ಬುದ್ದಿ ಹೇಳಿಕೊಟ್ಟು ಸಮಾಜದಲ್ಲಿ ಗೌರವವಾಗಿ ಬದುಕಬೇಕೆಂದು ಪ್ರತಿ ತಾಯಿ ತಂದೆ ಅಂದುಕೊಳ್ಳುತ್ತಾರೆ. ಹಾಗೆ ಶ್ರಮಪಟ್ಟು ತಾವು ತಿನ್ನದಿದ್ದರೂ ತಮ್ಮ ಮಕ್ಕಳು ತಿನ್ನಬೇಕೆಂದು ನೋಡುತ್ತಾರೆ. ಹೀಗೆ ಎಷ್ಟೋ ಕಷ್ಟ ಪಟ್ಟು ಮಕ್ಕಳನ್ನು ದೊಡ್ಡವರನ್ನಾಗಿ ಮಾಡಿದನಂತರ, ಆ ಮಕ್ಕಳು ತಮ್ಮ ತಾಯಿ ತಂದೆಯರನ್ನೇ ಮೋಸ ಮಾಡುತ್ತಾ, ತಮ್ಮ ಸುಖವನ್ನಷ್ಟೇ ನೋಡಿಕೊಳ್ಳುವವರು ಬಹಳ ಜನ ಸಮಾಜದಲ್ಲಿ ಇದ್ದಾರೆ. ತಾಯಿ ತಂದೆಯರ

ಮೇಲೆ ಪ್ರೇಮ ಇಲ್ಲದಿದ್ದರೂ ಪರವಾಗಿಲ್ಲ, ಆದರೆ ಯುಕ್ತ ವಯಸ್ಸಿಗೆ ಬರುವ ವರೆಗೂ ತಮ್ಮನ್ನು ಯಾವ ಲೋಪವಿಲ್ಲದೆ ಸಾಕಿರುವದರ ಬದಲಾಗಿ ತಾಯಿ ತಂದೆಯರನ್ನು ಪೋಷಿಸಬೇಕಾದ ಕರ್ತವ್ಯ ಮಕ್ಕಳಿಗಿರುತ್ತದೆ. ಅಂತಹ ಕರ್ತವ್ಯವನ್ನು ಮರೆತು ಹೋಗುವುದು ಪ್ರಪಂಚ ಪದ್ದತಿಯಲ್ಲಿ ಅನ್ಯಾಯವಾಗುತ್ತದೆ. ಹೊರ ಸಮಾಜಕ್ಕೆ ಸಂಬಂಧಿಸಿದ ನೀತಿ ನ್ಯಾಯದ ಪ್ರಕಾರ ನೋಡಿದರೆ ವಯಸ್ಸಾದ ಮೇಲೆ ತಮ್ಮಷ್ಟಕ್ಕೆ ತಾವು ಬದುಕದ ತಾಯಿ ತಂದೆಯರನ್ನು ಪೋಷಿಸದೇ, ಅವರ ಒಳ್ಳೆಯದು, ಕೆಟ್ಟದ್ದು ನೋಡದೇ ಹೋಗುವುದು ಅಕ್ರಮವು, ಅನ್ಯಾಯವಾಗುವುದು. ತಾಯಿ ತಂದೆ ಕೆಟ್ಟವರಾದರೂ ಅವರನ್ನು ಪೋಷಿಸುವುದು ಸಮಾಜದಲ್ಲಿನ ಅವರ ಮಕ್ಕಳ ಒಂದು ಕರ್ತವ್ಯ, ಇಲ್ಲಿಯವರೆಗೂ ಹೊರ ಸಮಾಜ ಸಂಬಂಧವಾದ ವಿಧಾನವನ್ನು ಹೇಳಿಕೊಂಡಿದ್ದೇವೆ. ಇನ್ನೂ ಹೋದರೆ ಆಧ್ಯಾತ್ಮಿಕ ಸಂಬಂಧವಾದ ವಿಧಾನದ ಪ್ರಕಾರ ಹೇಳಿಕೊಂಡರೆ ಈ ವಿಧವಾಗಿರು ವುದು.

ತಾಯಿ ತಂದೆ ಎನ್ನುವವರು ಎರಡು ವಿಧವಾಗಿ ಪ್ರತಿ ಮನುಷ್ಯನಿಗು ಇದ್ದಾರೆ. ಎರಡು ವಿಧವಾದ ತಾಯಿ ತಂದೆಯರೇನು? ಎಲ್ಲರಿಗೂ ಇರುವುದು ಒಂದೇ ತಾಯಿ ಒಂದೇ ತಂದೆ ತಾನೆ! ಎಂದು ಯಾರಾದರೂ ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ವಿವರವಾಗಿ ಹೇಳಿಕೊಂಡರೆ ಪ್ರಕೃತಿ ವಿಧಾನದಲ್ಲಿರುವ ತಾಯಿ ತಂದೆ ಬೇರೆ, ಪರಮಾತ್ಮ ವಿಧಾನದಲ್ಲಿರುವ ತಾಯಿ ತಂದೆ ಬೇರೆ. ಹೊರ ಸಮಾಜ ಸಂಬಂಧದ ಪ್ರಕಾರ ಕಾಣಿಸುವ ತಾಯಿ ತಂದೆ ಪ್ರಕೃತಿ ವಿಧಾನದಲ್ಲಿರುವವರು. ಹಾಗೆಯೇ ಅಂತರ್ಗತ ಆಧ್ಯಾತ್ಮಿಕಕ್ಕೆ ಸಂಬಂಧಿಸಿದ, ಕಾಣಿಸದ ತಾಯಿ ತಂದೆ ಬೇರೆ ಎಂದು ಹೇಳಬಹುದು. ವಾಸ್ತವವಾಗಿ ಪ್ರತಿಯೊಬ್ಬರಿಗೂ ಕಾಣಿಸುವ ಮತ್ತು ಕಾಣಿಸದ ಎರಡು ರೀತಿಯ ತಾಯಿ ತಂದೆ ಇದ್ದಾರೆಂದು ಹೇಳಬಹುದು. ಆಧ್ಯಾತ್ಮಿಕವನ್ನು ತಿಳಿದವರು ಎರಡು ರೀತಿಯ ತಾಯಿ ತಂದೆಯರನ್ನು ತಿಳಿದಿರುತ್ತಾರೆ. ಆಧ್ಯಾತ್ಮಿಕವನ್ನು ತಿಳಿಯದವರು ಕಾಣಿಸುವ ತಾಯಿ ತಂದೆಯರನ್ನು ಮಾತ್ರವೇ ತಿಳಿದಿರುತ್ತಾರೆ.

ಆಧ್ಯಾತ್ಮಿಕ, ಅನಾಧ್ಯಾತ್ಮಿಕ ಎಂದರೆ ನಿಮಗೆ ಅರ್ಥವಾಗದೆ ಹೋಗಬಹುದು. ಆದ್ದರಿಂದ ಅರ್ಥವಾಗುವ ಪದ್ಧತಿಯಲ್ಲಿ ಹೇಳಿಕೊಳ್ಳೋಣ. ಪ್ರತಿ ಮನುಷ್ಯನಿಗೆ ಒಂದು ಜೀವನ ಇದೆಯೆಂದು ಎಲ್ಲರಿಗೂ ತಿಳಿದಿದೆ. ಜೀವನ ಎನ್ನುವುದು ಹುಟ್ಟಿನಿಂದ ಪ್ರಾರಂಭವಾಗಿ, ಮರಣದೊಂದಿಗೆ ಮುಗಿಯುತ್ತದೆ. ಹುಟ್ಟಿನಿಂದ ಸಾಯುವವರೆಗೂ ಕಳೆದ ಕಾಲವನ್ನು ಒಂದು ಜೀವನ ಕಾಲವೆನ್ನುತ್ತೇವೆ. ಹುಟ್ಟಿನಲ್ಲಿ ಹೊಸ ಶರೀರ ಬರುತ್ತಿದೆ, ಮರಣದಲ್ಲಿ ಅಲ್ಲಿಯವರೆಗೂ ಇರುವ ಶರೀರ ಹೋಗುತ್ತದೆ. ಒಂದು ವೇಳೆ ಹೊಸ ಶರೀರ ಬಂದರೂ, ನಂತರ ಮರಣದಲ್ಲಿ ಹಳೆ ಶರೀರ ಹೋದರೂ, ಶರೀರದಲ್ಲಿ ನಿವಾಸಿಸುವ ಜೀವಾತ್ಮನು ಮಾತ್ರ ಹಾಗೆಯೇ ಇದ್ದಾನೆ. ಇದರಿಂದ ಜೀವನದಲ್ಲಿ ಜೀವಾತ್ಮನು ಶಾಶ್ವತವಾದವನೆಂದು ಶರೀರ ಅಶಾಶ್ವತ ಎಂದು ತಿಳಿಯುತ್ತದೆ. ಸಜೀವವಾಗಿರುವ ಒಬ್ಬ ಮನುಷ್ಯನನ್ನು ವಿಭಜಿಸಿ ನೋಡಿದರೆ ಜೀವಾತ್ಮ ಬೇರೆ, ಶರೀರ ಬೇರೆಯೆಂದು ತಿಳಿಯುತ್ತದೆ. **ಜೀವಿ + ಶರೀರ = ಒಬ್ಬ ಮನುಷ್ಯ,** ಇದನ್ನು ಯಾರೂ ಅಲ್ಲವೆನ್ನಲಾರರು. ಜೀವಿಯು, ಶರೀರ ಎಂಬ ಎರಡು ಭಾಗಗಳಾಗಿರುವ ಮನುಷ್ಯನಲ್ಲಿ ಶರೀರ ಸ್ವಲ್ಪ ಕಾಲವೇ ಇರುತ್ತದೆ. ಆದ್ದರಿಂದ ಶರೀರ ನಾಶವಾದರೂ ಜೀವಿಯು ನಾಶವಿಲ್ಲದವನೆಂದು, ಅವನು ನಂತರ ಜನ್ಮದಲ್ಲಿ ಮತ್ತೊಂದು ಹೊಸ ಶರೀರವನ್ನು ಹೊಂದುತ್ತಾನೆಂದು ತಿಳಿಯುತ್ತದೆ. ಒಂದು ಜೀವನದಲ್ಲಿನ ಶರೀರವನ್ನು, ಜೀವಿಯನ್ನು ತೆಗೆದುಕೊಂಡು ನೋಡಿದರೆ ಎರಡಕ್ಕೂ ತಾಯಿ ತಂದೆಯರಿದ್ದಾರೆಂದು ತಿಳಿಯುತ್ತದೆ. ಒಂದು ಸಜೀವ ಶರೀರಕ್ಕೆ ತಾಯಿ ತಂದೆ ಇದ್ದಾರೆಂದು ಹೇಳಿದರೇ, ಇತ್ತ ಶರೀರಕ್ಕೂ ಅತ್ತ ಜೀವಿಗೂ ಇಬ್ಬರಿಗೂ ತಾಯಿ ತಂದೆಯರಿದ್ದ ಹಾಗೆ ಅಲ್ಲವೆ!

ಒಬ್ಬ ಸಜೀವ ಮನುಷ್ಯನಿಗೆ ಇಂತಹವರೆ ತಾಯಿತಂದೆ ಎಂದು ಹೇಳುತ್ತಿದ್ದೇವೆ. ಹಾಗೆಯೇ ಅವರನ್ನು ತೋರಿಸುತ್ತೇವೆ. ಒಂದು ಉದ್ಯೋಗಕ್ಕಾಗಿ ಅರ್ಜಿ ಹಾಕಿದಾಗ ಅದರಲ್ಲಿಯೂ ಸಹ ತಾಯಿ ತಂದೆಯ ಹೆಸರು ಎನ್ನುವ ಜಾಗದಲ್ಲಿ ಶರೀರಕ್ಕೆ ಸಂಬಂಧಿಸಿದ ತಾಯಿ ತಂದೆಯರ ಹೆಸರನ್ನೇ

ಬರೆಯುತ್ತಿದ್ದೇವೆ. ಪ್ರತಿ ಮನುಷ್ಯನಿಗೆ ತನ್ನ ಶರೀರಕ್ಕೆ ಸಂಬಂಧಿಸಿದ ತಾಯಿ ತಂದೆಯ ಹೆಸರೇ ತಿಳಿದಿರುವುದು. ಆದರೆ ತನಗೆ ತಾಯಿ ತಂದೆ ಯಾರೊ, ಅವರ ಹೆಸರೇನೊ ತಿಳಿದಿಲ್ಲ. ಪ್ರತಿ ಮನುಷ್ಯ ತನ್ನ ಶರೀರವನ್ನೇ ತಾನು ಎಂದುಕೊಳ್ಳುತ್ತಿದ್ದಾನೆ. ಆದ್ದರಿಂದ ಶರೀರಕ್ಕೆ ಸಂಬಂಧಿಸಿದ ತಾಯಿ ತಂದೆಯರನ್ನೇ ತನ್ನ ತಾಯಿ ತಂದೆಯರಾಗಿ ಹೇಳುತ್ತಿದ್ದಾನೆ. ವಾಸ್ತವವಾಗಿ ತನ್ನ ತಾಯಿ ತಂದೆ ಬೇರೆಯೆಂದು ಯಾರಿಗೂ ತಿಳಿಯದು. ತನ್ನ ಶರೀರಕ್ಕೆ ತಾಯಿ ತಂದೆಯಾದವರನ್ನು, ತನ್ನ ತಾಯಿ ತಂದೆಯರಾಗಿ ಅಂದುಕೊಳ್ಳುವುದು ನಡೆಯುತ್ತಿದೆ. ಸಮಾಜದಲ್ಲಿ ಎಷ್ಟು ದೊಡ್ಡ ಅಧಿಕಾರದಲ್ಲಿ ಇದ್ದವನಾಗಲಿ, ದೇಶಕ್ಕೆ ರಾಜನಾಗಲಿ, ಮಂತ್ರಿಯಾಗಲಿ, ವಿಜ್ಞಾನಿಯಾಗಲಿ, ಮೇಧಾವಿಯಾಗಲಿ ಯಾವನಾದರೂ ಎಷ್ಟು ದೊಡ್ಡವನಾದರೂ ತನ್ನ ತಾಯಿ ತಂದೆಯರನ್ನು ಮಾತ್ರ ತಿಳಿದಿಲ್ಲ. ತಮಗೆ ತಾಯಿ ತಂದೆ ಇದ್ದಾರೆನ್ನುವ ವಿಷಯವನ್ನೇ ಮರೆತು ಹೋಗಿದ್ದಾರೆ. ವಾಸ್ತವವಾಗಿ ತನ್ನನ್ನೇ ಮರೆತುಹೋಗಿ, ತನ್ನ ಶರೀರವನ್ನೇ ತಾನೆಂದು ಲೆಕ್ಕಿಸಿಕೊಂಡು, ತಾನು ಎತ್ತರವಾದವನೆಂದು, ಗಿಡ್ಡಗಿರುವವನೆಂದು, ಕಪ್ಪಾಗಿರುವೆನೆಂದು ಅಥವಾ ಬೆಳ್ಳಗಿರುವವನೆಂದು ಅಂದುಕೊಳ್ಳುತ್ತಿದ್ದಾನೆ. ವಾಸ್ತವವಾಗಿ ಯಾವ ಮನುಷ್ಯನು ತಾನು ಶರೀರ ಅಲ್ಲವೆಂದು, ತಾನು ಬೇರೆ, ತನ್ನ ತನುವು ಬೇರೆ ಎಂದು ಜ್ಞಾಪಕದಲ್ಲಿಟ್ಟುಕೊಳ್ಳದೆ ತನ್ನ ಶರೀರವನ್ನೇ ತಾನೆಂದು ಪೂರ್ಣವಾಗಿ ನಂಬಿ, ತನ್ನ ಶರೀರದ ತಾಯಿ ತಂದೆಯರನ್ನೇ ತನ್ನ ತಾಯಿ ತಂದೆಯರೆಂದು ಅಂದುಕೊಳ್ಳುವುದು ರೂಡಿಯಲ್ಲಿದೆ.

ಹುಟ್ಟಿದ ಪ್ರತಿ ಮನುಷ್ಯ ಹಾಗೆ ತಿಳಿದುಕೊಳ್ಳುವುದರಿಂದ ಮನುಷ್ಯನ ಒಂದು ಅಸಲಾದ ತಾಯಿ ತಂದೆ ಯಾರೋ ಮನುಷ್ಯನಿಗೆ ತಿಳಿಯದಂತಾಗಿ ಹೋಗಿದೆ. ಅಂತಹ ಸಮಯದಲ್ಲಿ ದೇವರೇ ಸ್ವತಃವಾಗಿ ಜೀವಿಯ ತಂದೆ ತಾಯಿಯರನ್ನು ಕುರಿತು ತಿಳಿಸಬೇಕಾಗುತ್ತದೆ. ಭಗವದ್ಗೀತೆಯನ್ನು ಹೇಳಿದ ಸಂದರ್ಭದಲ್ಲಿ ಜೀವಿಯ ತಾಯಿ ತಂದೆ ಯಾರೋ ದೇವರೇ ತಿಳಿಸಿದ್ದಾನೆ. ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗದಲ್ಲಿ ಮೂರು, ನಾಲ್ಕು ಶ್ಲೋಕಗಳು ಹೀಗಿವೆ.

***ಶ್ಲೋ॥ 3) ಮಮಯೋನಿ ರ್ಮಹದ್ಬ್ರಮ್ಹ ತಸ್ಮಿನ್ ಗರ್ಭಮ್ ದಧಾಮ್ಯಹಮ್,***
***ಸಂಭವ ಸರ್ವ ಭೂತಾನಾಂ ತತೋ ಭವತಿ ಭಾರತ।***

***ಶ್ಲೋ॥ 4) ಸರ್ವ ಯೋನಿಷು ಕೌಂತೇಯ! ಮೂರ್ತಯಃ ಸಂಭವಂತಿಯಾಃ,***
***ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜಪ್ರದಃ ಪಿತಾ॥***

ಈ ಶ್ಲೋಕಗಳ ಭಾವದ ಪ್ರಕಾರ ದೇವರು ಹೇಳಿರುವುದು ಹೀಗಿದೆ. "ವಿಶಾಲವಾದ, ದೊಡ್ಡದಾದ ಪ್ರಕೃತಿಯೇ ಸ್ತ್ರೀ ಸ್ವರೂಪವಾದ ಯೋನಿಯಾಗಿ (ಗರ್ಭವಾಗಿ) ಇದೆ. ಅದನ್ನು ನಾನು ಗರ್ಭ ಧರಿಸುವಂತೆ ಮಾಡುತ್ತಿದ್ದೇನೆ. ಆದ್ದರಿಂದ ಸರ್ವ ಜೀವರಾಶಿಗಳು ಹುಟ್ಟುತ್ತಿವೆ. ಭೂಮಿ ಮೇಲೆ ಯಾವ ಜೀವರಾಶಿಯಾಗಲಿ ಯಾವ ತಾಯಿ ಗರ್ಭದಿಂದ ಹುಟ್ಟಿದರೂ, ವಿವಿಧ ರೂಪದಲ್ಲಿ ಕಾಣಿಸುವ ಜೀವರಾಶಿಗಳಿಗೆಲ್ಲಾ ಪ್ರಕೃತಿ ತಾಯಿಯಾಗಿ ಬೀಜದಾತನಾದ ನಾನು ತಂದೆಯಾಗಿ ಇದ್ದೇನೆ". ಎಂದು ಹೇಳಿದ್ದಾನೆ. ಭಗವಂತನು ಗೀತೆಯಲ್ಲಿ ಹೇಳಿದರ ಪ್ರಕಾರ ಜೀವಾತ್ಮನು ಯಾವ ಶರೀರ ಗರ್ಭದಲ್ಲಿ ಹುಟ್ಟಿದರೂ ಆ ಶರೀರದಲ್ಲಿ ಮೂಲ ಧಾತುಗಳಾದ ಪಂಚ ಭೂತಗಳ ಪ್ರಕೃತಿ ತಾಯಿ, ಅದಕ್ಕೆ ಚೈತನ್ಯವೆನ್ನುವ ಬೀಜವನ್ನು ಕೊಟ್ಟ ದೇವರು ತಂದೆ ಆಗುತ್ತಾನೆ. ಇದನ್ನನುಸರಿಸಿ ಎಷ್ಟೋ ದೊಡ್ಡವನಾದ ದೇವರಿಗೆ ಸ್ವಂತ ಮಕ್ಕಳಾಗಿದ್ದೂ ಮತ್ತು ಎಷ್ಟೋ ದೊಡ್ಡ ಬಲ ಇರುವ ಪ್ರಕೃತಿ ಸಂತಾನವಾಗಿದ್ದು, ಮನುಷ್ಯ ತನ್ನ ಅಧಿಕಾರವನ್ನು ತಾನು ಮರೆತು ಹೋಗಿ ತನ್ನನ್ನು ಅಶಾಶ್ವತವಾದ ಶರೀರಕ್ಕೆ ಹೋಲಿಸಿಕೊಂಡು ಬಹಳ ಚಿಕ್ಕವನಾಗಿ ಹೋಗಿದ್ದಾನೆ.

ಶಾಶ್ವತವಾದ ತಾಯಿ ತಂದೆಯನ್ನು ತಿಳಿದುಕೊಂಡರೆ ಮನುಷ್ಯ ಶಾಶ್ವತವಾದ ಮೋಕ್ಷವನ್ನು ಹೊಂದಬಲ್ಲನು. ಅಶಾಶ್ವತವಾದ ಶರೀರವಾಗಿ ತನ್ನನ್ನು ತಾನು ಲೆಕ್ಕಿಸಿಕೊಳ್ಳುವುದರಿಂದ ಮನುಷ್ಯ ಅಶಾಶ್ವತನಾದವನಾಗಿ ಹೋಗಿದ್ದಾನೆ. ಅಶಾಶ್ವತವಾದ ಜನ್ಮಗಳನ್ನು ಹೊಂದುತ್ತಿದ್ದಾನೆ. ಅಶಾಶ್ವತವಾದ ಶರೀರವನ್ನು ತಾನಾಗಿ ನಂಬುವಂತೆ ಜೀವಾತ್ಮನನ್ನು ಮಾಯೆ ಭ್ರಮೆಪಡುವಂತೆ

ಮಾಡುತ್ತಿದೆ. ಮನುಷ್ಯ ತನ್ನ ನಿಜವಾದ ತಂದೆಯನ್ನು ಕುರಿತು ತಿಳಿದುಕೊಳ್ಳಬೇಕೆಂದು, ತಂದೆ ಮೇಲೆ ಶ್ರದ್ಧೆ ವಹಿಸುವವರೆಗೂ ಮಾಯೆ ಮನುಷ್ಯನನ್ನು ತಾನು ಯಾರೋ ತಿಳಿಯದಂತೆ, ತಾನು ಶರೀರವೆಯೆಂದು ಭ್ರಮೆ ಪಡುವಂತೆ ಮಾಡುತ್ತಿರುತ್ತದೆ. ಪ್ರಕೃತಿ ಮನುಷ್ಯನಿಗೆ ತಾಯಿಯಾದ ವಿಷಯ ಮನುಷ್ಯನಿಗೆ ತಿಳಿಯದು ತಾನೆ! ತಾಯಿ ಪ್ರಕೃತಿಯೇ ಮತ್ತೊಂದು ರೂಪ ಧರಿಸಿ ಮಾಯೆಯಂತೆ ಕರೆಯಲ್ಪಡುತ್ತಿದೆ. ಶರೀರದಲ್ಲಿ ಗುಣಗಳ ರೂಪದಲ್ಲಿರುವ ಮಾಯೆ ಮನುಷ್ಯನನ್ನು ದೇವರ ಜ್ಞಾನದಕಡೆಗೆ ಹೋಗದ ಹಾಗೆ ಕರ್ಮದೊಳಗೆ ಮುಳುಗಿಸುತ್ತಿದೆ. ಮಾಯೆ ಮಾತೆಯ ಕೈಯಿಂದ ತಯಾರು ಮಾಡಿದ ಬಲೆಯಲ್ಲಿ ಸಿಲುಕಿಕೊಂಡ ಮನುಷ್ಯ, ಆ ಬಲೆಯಿಂದ ಹೊರಬೀಳದೆ ಹೋಗುತ್ತಿದ್ದಾನೆ. ಮಾಯೆ ಬಲೆಯಲ್ಲಿ ಹನ್ನೆರಡು ವಿಧವಾದ ದಾರಗಳಿವೆ. ಒಂದೊಂದು ದಾರದ ಎಳೆ ಮನುಷ್ಯನಿಗಿಂತ ಎಲ್ಲಾ ವಿಧದಲ್ಲಿ ಬಲವಾದದ್ದಾಗಿದೆ. ಮನುಷ್ಯನನ್ನು ಬಂಧಿಸುವುದಕ್ಕೆ ಮಾಯೆ ಉಪಯೋಗಿಸಿದ ಬಲೆಯಲ್ಲಿ ಒಂದೊಂದು ವಿಧ ದಾರದ ಎಳೆಗಳು ಒಂಭತ್ತು ಇವೆ. ಅದರ ಪ್ರಕಾರ ಹನ್ನೆರಡು ವಿಧವಾದ ದಾರಗಳು ಸೇರಿ ಒಟ್ಟು 108 ಎಳೆಗಳ ಬಲೆಯಾಗಿ ತಯಾರಾಗಿದೆ. 108 ಎಳೆಗಳ ಬಲೆ ಚಿಕ್ಕದೇ ಆದರೂ, ಎಳೆಗಳು ಹೆಚ್ಚಿಗೆ ಇಲ್ಲದಿದ್ದರೂ ಮನುಷ್ಯನನ್ನು ಬಂಧಿಸುವುದಕ್ಕೆ ಬಹಳ ಸುಲಭವಾಗಿದೆ. ಮಾಯೆಯ ಬಲೆ ಸಾಧಾರಣ ಮೀನಿನ ಬಲೆಯಂತದಲ್ಲ. ಬಲೆಯಲ್ಲಿನ ಪ್ರತಿದಾರದ ಎಳೆ ಒಂದು ಪ್ರಭಾವವು ಹೊಂದಿರುತ್ತದೆ. ಪ್ರತಿ ದಾರದ ಎಳೆಯಲ್ಲೂ ಒಂದು ಗುಣ ಪ್ರಭಾವವಿರುತ್ತದೆ. ಆ ಗುಣ ಪ್ರಭಾವ ಹೊಂದಿದ ಬಲೆಯಲ್ಲಿ ಪ್ರತಿ ದಾರವು ಮನುಷ್ಯನನ್ನು ತನ್ನ ಕಡೆಗೆ ಸೆಳೆಯುವ ಪ್ರಭಾವವನ್ನು ಹೊಂದಿದೆ. ಆದ್ದರಿಂದ ಮನುಷ್ಯ ಪ್ರತಿ ಕ್ಷಣವೂ ಯಾವುದೋ ಒಂದು ಗುಣಕ್ಕೆ ಅಂಟಿಕೊಂಡು ಹೋಗುತ್ತಿದ್ದಾನೆ. ಪ್ರತಿ ಗುಣವು ಬಲೆಯಲ್ಲಿ ಒಂದು ದಾರದ ಎಳೆಯಾಗಿದ್ದು, ಆಕರ್ಷಣೆ ಹೊಂದಿರುವುದರಿಂದ ಆ ಗುಣವೊಂದರ ಆಕರ್ಷಣೆ ಪ್ರಭಾವದಲ್ಲಿ ಬೀಳುತ್ತಿದ್ದಾನೆ. (ಆಕರ್ಷಣೆಯನ್ನೇ **ಬಲಿ** ಎಂದು ಸಹಾ ಅನ್ನಬಹುದು. **ಬಲಿ**

**ಎಂಬ ಪದದಿಂದ ಬಲೆ ಎಂಬ ಪದ ಹುಟ್ಟಿದೆ.** ಆದ್ದರಿಂದ ಆಕರ್ಷಣೆ ಪ್ರಭಾವವಿರುವ ಗುಣಗಳನ್ನು ಬಲೆಯಾಗಿ ವರ್ಣಿಸಿ ಹೇಳುತ್ತಿದ್ದೇವೆ.) ಮಾಯೆಯ ಗುಣಗಳ ಬಲೆಯಲ್ಲಿ ಸಿಲಿಕಿಕೊಳ್ಳದವನು ಭೂಮಿಯ ಮೇಲೆ ಯಾರೂ ಇಲ್ಲವೆಂದೇ ಹೇಳಬಹುದು. ಎಂದರೆ ಮಾಯೆಯ ಪ್ರಭಾವದಲ್ಲಿ ಬೀಳದಿರುವವನು ಯಾರೂ ಇಲ್ಲವೆಂದೇ ಹೇಳಬಹುದು. ಏನೋ ಒಂದು ಆಕರ್ಷಣೆಯಿಂದ ಮೀನುಗಳು ಬಲೆಯಲ್ಲಿ ಸಿಲುಕಿಕೊಂಡಹಾಗೆ ಮಾಯೆಯ ಬಲೆಯಲ್ಲಿ ಸಹ ಮನುಷ್ಯ ಸಿಲುಕಿಕೊಳ್ಳುತ್ತಿದ್ದಾನೆ. ಮೀನಿನ ಬಲೆಯಲ್ಲಿದ್ದ ದಾರಗಳೆಲ್ಲಾ ಒಂದೇ ವಿಧವಾಗಿದ್ದರೆ, ಮಾಯೆಯ ಬಲೆಯಲ್ಲಿ 108 ವಿಧಗಳ ದಾರಗಳಿವೆಯೆಂದು ಹೇಳಿಕೊಂಡಿದ್ದೇವಲ್ಲವೆ! 108 ದಾರಗಳು ಹನ್ನೆರಡು ಗುಣಭಾಗಗಳೊಂದಿಗೆ ಕೂಡಿಕೊಂಡಿವೆ. ಅವುಗಳ ಒಂದೊಂದರ ಹೆಸರನ್ನು ಹೇಳಿಕೊಂಡರೆ ಈ ವಿಧವಾಗಿ ಇವೆ. 1) ಕಾಮ 2) ಕ್ರೋಧ 3) ಲೋಭ 4) ಮೋಹ 5) ಮದ 6) ಮತ್ಸರ 7) ದಾನ 8) ದಯ 9) ಔದಾರ್ಯ 10) ವೈರಾಗ್ಯ 11) ವಿನಯ 12) ಪ್ರೇಮ. ಈ ಹನ್ನೆರಡು ಗುಣಭಾವಗಳಲ್ಲಿ ಮನುಷ್ಯನನ್ನು ಅಶಾಶ್ವತವಾದ ತನ್ನ ಶರೀರವನ್ನು ತಾನಾಗಿ ಭ್ರಮಿಸುವಂತೆ ಮಾಡುತ್ತದೆ, ಶರೀರದ ಅಶಾಶ್ವತ ತಾಯಿ ತಂದೆಯರನ್ನು ತನ್ನ ತಾಯಿ ತಂದೆಯರೆಂದು ಭಾವಿಸುವಂತೆ ಮಾಡುತ್ತದೆ, ನಾನು ಅಂದಗಾರ ಅಥವಾ ಅಂದಹೀನನೆಂದು, ಕಪ್ಪುಬಣ್ಣ ಇರುವವನೆಂದು ಅಥವಾ ಬೆಳ್ಳಗಿರುವವನೆಂದು, ಉದ್ದವಾಗಿರುವವನೆಂದು ಅಥವಾ ಗಿಡ್ಡಗಿರುವನೆಂದು ತನ್ನ ಶರೀರವನ್ನನುಸರಿಸಿ ಭ್ರಮಿಸುವಂತೆ ಮಾಡುವುದು ಗುಣ ಸಾಲಿನಲ್ಲಿ ನಾಲ್ಕನೆಯದಾದ ಮೋಹಗುಣವು. ಅಷ್ಟೇ ಅಲ್ಲದೆ ಶರೀರದ ತಾಯಿ ತಂದೆಯರನ್ನು ಸಹ ಆ ಶರೀರದಲ್ಲಿರುವ ಜೀವಾತ್ಮನಿಗೆ ತಾಯಿ ತಂದೆಯೆಂದು ಭ್ರಮಿಸುವಂತೆ ಮಾಡುವುದು ಸಹ ಮೋಹಗುಣವೇ.

ಶರೀರದ ತಾಯಿ ತಂದೆಯರಿಂದ ಹುಟ್ಟಿದ ಶರೀರಕ್ಕೆ ತಾಯಿ ತಂದೆಯರ ಶರೀರ ಹೋಲಿಕೆಗಳು ಬಂದಿರುತ್ತವೆ. ಬಾಹ್ಯ ತಾಯಿ ತಂದೆಯರ ಶರೀರ ಹೋಲಿಕೆಗಳು ಅವರ ಸಂತತಿಗೆ ಇರುವುದು ಸಹಜ. ತಾಯಿಯ ಹೋಲಿಕೆ

ಸ್ವಲ್ಪ, ತಂದೆಯ ಹೋಲಿಕೆ ಸ್ವಲ್ಪ ಹುಟ್ಟಿದ ಸಂತತಿಗೆ ಇರುವುದು ಸಹಜ. ಕೆಲವರಲ್ಲಿ ತಾಯಿ ಹೋಲಿಕೆ ಹೆಚ್ಚಾಗಿದ್ದು, ತಂದೆ ಹೋಲಿಕೆ ಕಡಿಮೆ ಇರುವುದು. ಕೆಲವರಲ್ಲಾದರೆ ತಂದೆ ಹೋಲಿಕೆಗಳು ಹೆಚ್ಚಾಗಿದ್ದೂ, ತಾಯಿ ಹೋಲಿಕೆ ಕಡಿಮೆ ಇರುವುದು. ಅಪರೂಪವಾಗಿ ಕೆಲವರಲ್ಲಿ ತಾಯಿ ತಂದೆಯರಲ್ಲಿನ ಒಬ್ಬರ ಹೋಲಿಕೆಗಳು ಮಾತ್ರವೇ ಇರುತ್ತವೆ. ಮನುಷ್ಯ ಈ ಹೋಲಿಕೆಗಳ ವಿಷಯದಲ್ಲಿ ಪೂರ್ತಿಯಾಗಿ ಮೋಹಗುಣದ ಬಲೆಯಲ್ಲಿ ಸಿಲುಕಿಕೊಳ್ಳುತ್ತಿದ್ದಾನೆ. ತನ್ನ ಶರೀರಕ್ಕಿರುವ ತಾಯಿ ತಂದೆಯರ ಹೋಲಿಕೆಗಳನ್ನು ನೋಡಿ ನಾನು ಇವರ ಮಗನೇ ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ಶರೀರವೇ ತಾನೆಂದುಕೊಂಡ ಮನುಷ್ಯ, ತನ್ನ ಶರೀರ ಹೋಲಿಕೆಗಳಿರುವ ತಾಯಿ ತಂದೆಯರನ್ನು ತನ್ನ ತಾಯಿ ತಂದೆಯರೆಂದು ಅಂದುಕೊಳ್ಳುತ್ತಿದ್ದಾನೆ. ತಾನು, ತನ್ನವರೆಂಬ, ಭ್ರಮೆ ಕಲ್ಪಿಸುವುದು ಮೋಹಗುಣವು. ಮೋಹಗುಣ ಪ್ರಭಾವದಿಂದ ಚಿಕ್ಕ ವಯಸ್ಸಿನಿಂದ ತಾಯಿ ತಂದೆಯರನ್ನು ತನ್ನವರೆಂದು ಗುರ್ತಿಸಿದ ಮನುಷ್ಯ, ದೊಡ್ಡವನಾದ ಮೇಲೆ ತನ್ನ ಶರೀರ ಹೋಲಿಕೆಗಳು ತಾಯಿ ತಂದೆಯರ ಹೋಲಿಕೆಗಳೊಂದಿಗೆ ಕೂಡಿಕೊಂಡಿರುವುದನ್ನು ನೋಡಿ, ನಾನು ನಿಜವಾಗಿ ಇವರ ಮಗನೇ, ಇವರೇ ನನ್ನ ತಾಯಿ ತಂದೆಯರೆಂಬ ಬಂಧವನ್ನು ಬೆಳೆಸಿಕೊಳ್ಳುವನು. ತಾಯಿ ತಂದೆಯ ಮೇಲೆ ಮಗನಿಗೂ ಮಗನಮೇಲೆ ತಾಯಿ ತಂದೆಯರಿಗೂ ಅನುರಾಗವೂ, ಅನುಬಂಧ ಬೆಳೆಯುವುದು. ಆಗ ಮನುಷ್ಯ ಮೋಹ ಗುಣವೆಂಬ ಬಲೆಯಲ್ಲಿ ಸಿಲುಕಿಕೊಂಡಹಾಗೆ ಆಗುತ್ತದೆ. ಇದೇ ವಿಷಯವನ್ನೇ ಒಬ್ಬ ಕವಿ ತನ್ನ ಹಾಡಿನಲ್ಲಿ ಅನುರಾಗ, ಅನುಬಂಧ ಅಂದವಾದ ಬಲೆಗಳೆಂದು ಹೇಳಿದ್ದಾನೆ. ಈ ಮಾತನ್ನು ಆ ಕವಿ ಸ್ವಲ್ಪ ಜ್ಞಾನ ದೃಷ್ಟಿಯಿಂದ ಹೇಳಿದಹಾಗೆ ತಿಳಿಯುತ್ತಿದೆ. ಹನ್ನೆರಡು ಗುಣಗಳಲ್ಲಿ ಒಂದು ಮೋಹಗುಣವೇ ಬಹಳ ಚಿಕ್ಕ ವಯಸ್ಸಿನಿಂದಲೇ ಪ್ರಾರಂಭವಾಗಿ ಮೊದಲು ತಾಯಿಯನ್ನು ತನ್ನವಳೆಂದು ಗುರ್ತಿಸಿದನಂತರ ತಂದೆಯನ್ನು ಗುರ್ತಿಸುವಂತೆ ಮಾಡಿ, ಆನಂತರ ಕುಟುಂಬದವರನ್ನೆಲ್ಲಾ ತನ್ನವರೆಂದು ಲೆಕ್ಕಿಸುವಂತೆ ಮಾಡುತ್ತಿದೆ.

ಮೋಹ ಗುಣಕ್ಕಿಂತ ಮೊದಲನೆಯದಾದ ಆಸೆಯನ್ನು, ಎರಡನೆಯದಾದ ಕೋಪವನ್ನು ಎಲ್ಲರೂ ದೊಡ್ಡದಾಗಿ ಹೇಳಿಕೊಂಡರೂ, ಆಧ್ಯಾತ್ಮಿಕವಾಗಿ ಮನುಷ್ಯನನ್ನು ತಾನು ನಿಜವಾಗಿ ಯಾರೋ ತಿಳಿದುಕೊಳ್ಳದಂತೆ ಮಾಡುವುದು ಮೋಹಗುಣವೇ. **ತನಗೆ ಕರ್ಮಗಳನ್ನು ಅಂಟಿಸುವುದರಲ್ಲಿ ಕಾಮ (ಆಸೆ), ಕ್ರೋಧ (ಕೋಪ)ಗಳು ಮೊದಲನೆಯವಾದರೂ, ಮನುಷ್ಯನನ್ನು ಆಧ್ಯಾತ್ಮಿಕವಾಗಿ ಮೋಸ ಮಾಡುವುದರಲ್ಲಿ ಮೊದಲನೆಯದು ಮೋಹಗುಣವೇ.** ಆದ್ದರಿಂದಲೇ ಭಗವದ್ಗೀತೆಯಲ್ಲಿ ದೇವರು ಅರ್ಜುನನಿಗೆ ಮೊದಲು ಮೋಹ ಗುಣವೇ ಯುದ್ಧಕ್ಕೆ ಅಡ್ಡ ಬರುವಹಾಗೆ ಮಾಡಿ, ತಾನು ಮೋಹಗುಣದಿಂದ ತನ್ನ ಶರೀರಕ್ಕೆ ಸಂಬಂಧಿಸಿದವರನ್ನೆಲ್ಲಾ ತನ್ನವರೆಂದು ತಿಳಿದು ಅರ್ಜುನನನ್ನು ದುಃಖಿಸುವಂತೆ ಮಾಡಿ, ತನ್ನನ್ನು ತಾನು ಮರೆತಿದ್ದ ಸ್ಥಿತಿಯಲ್ಲಿ ಅರ್ಜುನನಿದ್ದಾಗ, ಈಗಲೇ ಮನುಷ್ಯನಿಗೆ ಜ್ಞಾನವು ಅವಶ್ಯಕವೆನ್ನುವಂತೆ ಭಗವಂತನು ದೈವಜ್ಞಾನವನ್ನು ಅರ್ಜುನನಿಗೆ ತಿಳಿಸಿದ್ದಾನೆ. ಇದರಿಂದ ಆಧ್ಯಾತ್ಮಿಕಕ್ಕೆ ಅಡ್ಡ ಬರುವುದು ಮುಖ್ಯವಾಗಿ ಮೋಹಗುಣವೇ ಎಂದು, ಅದೇ ನಿಜವಾದ ಶಾಶ್ವತವಾದ ತನ್ನ ತಾಯಿ ತಂದೆಯರನ್ನು ಮರೆಯುವಂತೆ ಮಾಡಿ, ತನಗೆ (ಜೀವಾತ್ಮನಿಗೆ) ತಾಯಿ ತಂದೆ ಅಲ್ಲದಂತಹ ಅಶಾಶ್ವತ ತಾಯಿ ತಂದೆಯನ್ನು ತನ್ನ ತಾಯಿ ತಂದೆಯರಾಗಿ ಲೆಕ್ಕಿಸುವಂತೆ ಮಾಡುತ್ತದೆ. ಈ ವಿಧವಾಗಿ ಮೋಹಗುಣದಲ್ಲಿ ಅಂಟಿಕೊಂಡು ತನ್ನ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರನ್ನು ಗುರ್ತಿಸದವನು ಭೂಮಿಯ ಮೇಲೆ ಹುಟ್ಟಿದರೂ ಪ್ರಯೋಜನ ಇಲ್ಲವೆಂದು ಕೆಲವರು ಹಿರಿಯರು ಹೇಳಿದ್ದಾರೆ. ಇದೇ ವಿಷಯವನ್ನು ವೇಮನ ಯೋಗಿ ಸಹ ತನ್ನ ಪದ್ಯದಲ್ಲಿ ವಿವರಿಸುತ್ತಾ ಹೀಗೆ ಹೇಳಿದ್ದಾನೆ.

***ತಾಯಿ ತಂದೆಯರ ಮೇಲೆ ದಯವಿಲ್ಲದ***
***ಪುತ್ರನು ಹುಟ್ಟಲೇಕೆ ಅವನು ಸಾಯಲೇಕೆ***
***ಹುತ್ತದೊಳಗಿನ ಗೆದ್ದಲು ಹುಟ್ಟದಾ ಸಾಯದಾ***
***ವಿಶ್ವದಾಭಿರಾಮ ಕೇಳೊ ವೇಮಾ!***

ಈ ಪದ್ಯವನ್ನು ಬಹಳ ಜನ ಚಿಕ್ಕ ವಯಸ್ಸಿನಲ್ಲೇ ಓದಿದರು ಇದರಲ್ಲಿನ ಭಾವವು ಯಾರಿಗೂ ಅರ್ಥವಾಗದಂತೆ ಮಾಯೆ ಮಾಡುವುದೆ ಅಲ್ಲದೆ, ಮೇಲಿನ ಪದ್ಯದಲ್ಲಿ ವೇಮನಯೋಗಿ ಹೇಳಿರುವುದು ಸಹ ಶರೀರ ತಾಯಿ ತಂದೆಯರನ್ನೇ ಎನ್ನುವ ಹಾಗೆ ಭ್ರಮಿಸುವಂತೆ ಮಾಡಿದೆ. ವೇಮನ ಯೋಗಿ ಈ ಪದ್ಯವನ್ನು ಹೇಳುವುದಕ್ಕಿಂತ ಮೊದಲು ಒಂದು ಪದ್ಯವನ್ನು ಹೀಗೆ ಹೇಳಿದ್ದಾನೆ.

***ವೇಮನ ಪದ್ಯವಮರ ಸಹಸ್ರ***
***ವಿಧವು ಶೋಧಿಸಿ ನೋಡ ಹೋದರೆ***
***ಚೋದ್ಯವಾದ ಜ್ಞಾನ ಕಲ್ಗುವುದು***
***ವಿಶ್ವದಾಭಿರಾಮ ಕೇಳೊ ವೇಮ***

ಈ ಪದ್ಯವೊಂದರ ಭಾವದ ಪ್ರಕಾರ ವೇಮನ ಪದ್ಯವನ್ನು ಓದುವ ಎಲ್ಲರಿಗೂ ಒಬ್ಬೊಬ್ಬರಿಗೆ ಒಂದೊಂದು ವಿಧವಾದ ಅರ್ಥಕೊಟ್ಟರೂ, ಆ ಪದ್ಯವನ್ನು ವಿವರಿಸಿಕೊಂಡು ನೋಡುವುದಾದರೆ ಪದ್ಯದಲ್ಲಿ ಆಶ್ಚರ್ಯಕರವಾದ ಜ್ಞಾನ ಬಿಟ್ಟು ಬೇರೇನು ಇಲ್ಲವೆಂದು ವೇಮನ ಯೋಗಿಯೇ ಸ್ವತಃವಾಗಿ ಹೇಳಿದ ಹಾಗೆ ತಿಳಿಯುತ್ತಿದೆ. ಇದರಿಂದ ತಾಯಿ ತಂದೆಯ ಮೇಲೆ ದಯವಿಲ್ಲದ ಪುತ್ರನು ಎನ್ನುವ ಪದ್ಯದಲ್ಲಿ ವೇಮನಯೋಗಿ ಆತ್ಮ ಜ್ಞಾನ ಸಂಬಂಧವಾದ ತಾಯಿ ತಂದೆಯರನ್ನು ಕುರಿತು ಹೇಳಿದ್ದಾನೆಂದು, ಶರೀರ ಸಂಬಂಧ ತಾಯಿ ತಂದೆಯರನ್ನು ಕುರಿತು ಹೇಳಲಿಲ್ಲವೆಂದು ಅರ್ಥವಾಗುತ್ತದೆ. ಆತ್ಮ ಸಂಬಂಧ ಜ್ಞಾನದ ಪ್ರಕಾರ ಆ ಪದ್ಯವನ್ನು ಅರ್ಥಮಾಡಿಕೊಂಡರೆ ಮನುಷ್ಯನ ನಿಜವಾದ, ಶಾಶ್ವತವಾದ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರನ್ನು ಕುರಿತು ಹುಟ್ಟಿದ ನಂತರ ತಿಳಿಯದಿದ್ದವನು, ಪ್ರಕೃತಿ ಪರಮಾತ್ಮನ ಮೇಲೆ ಧ್ಯಾಸ ಇಲ್ಲದವನು, ಅವರ ಮೇಲೆ ಶ್ರದ್ಧೆ, ದಯೆ ಇಲ್ಲದವನು ಹುಟ್ಟಿದರೂ ಪ್ರಯೋಜನವಿಲ್ಲವೆಂದು, ಅಂತಹವನು ಹುಟ್ಟಿದರೂ ಹುಟ್ಟದಿದ್ದರೂ ಒಂದೇ ಎಂದು, ಹುತ್ತದಲ್ಲಿನ ಗೆದ್ದಲು ಹುಟ್ಟಿ ಸತ್ತಹಾಗೆ, ಅವನಿದ್ದು ನಿಷ್ಪ್ರಯೋಜನವಾದ ಜನ್ಮವೆಂದು

ವೇಮನಯೋಗಿ ತನ್ನ ಪದ್ಯದಲ್ಲಿ ಹೇಳಿದ್ದಾನೆ. ಆ ಮಾತು ನಮಗೆ ಮಾಯೆ ಪ್ರಭಾವದಿಂದಲೇ ಅರ್ಥವಾಗಿಲ್ಲ.

ಬ್ರಹ್ಮವಿದ್ಯಾಶಾಸ್ತ್ರವಲ್ಲದೆ ಭೌತಿಕಶಾಸ್ತ್ರವನ್ನು ಓದಿದವರೂ, ವಿಜ್ಞಾನಿಗಳೆಂದುಕೊಂಡು ವಿಜ್ಞಾನ ವೇದಿಕೆಗಳನ್ನು ಇಟ್ಟುಕೊಂಡವರೂ, ನಮಗೆ ತಿಳಿಯದ ಸೈನ್ಸ್ (ವಿಜ್ಞಾನ) ಇಲ್ಲವೆಂದು ಮೇಧಾವಿಗಳಾಗಿ ಚಲಾವಣೆ ಆಗುವವರೂ, ಅವರು ಓದಿದ ಶಾಸ್ತ್ರಗಳ ಪ್ರಕಾರ, ಪ್ರಕೃತಿ ಪರಮಾತ್ಮ ತಾಯಿ ತಂದೆಯರಾಗಿ ಇದ್ದಾರೆಂಬ ನಮ್ಮ ಮಾತನ್ನು ಖಂಡಿಸಬಹುದು. ನಮ್ಮ ಮಾತು ಶಾಸ್ತ್ರವಿರುದ್ಧವಾಗಿರುವುದೆಂದು ಹೇಳಬಹುದು. ದೇವರು ಎಲ್ಲರಿಗೂ ನಿಜವಾದ ತಂದೆ ಎನ್ನುವ ಮಾತನ್ನು ಹುಚ್ಚು ಮಾತಾಗಿ ವರ್ಣಿಸಿ ಹೇಳಬಹುದು. ಅವರು ಹಾಗೆ ಹೇಳುವುದಕ್ಕೆ ಕಾರಣ ಇದೆ, ಅದೇನೆಂದರೆ! ಒಂದು ಮಗುವಿಗೆ ಅವರ ಶರೀರ ತಾಯಿ ತಂದೆಯರ ಶರೀರ ಹೋಲಿಕೆಗಳೇ ಅಲ್ಲದೆ, ವಂಶ ಪಾರಂಪರ್ಯ ಜೀನ್ಸ್ ಸಹ ಮಗುವಿನ ಶರೀರದಲ್ಲಿ ಇರುವುದರಿಂದ, ಕೆಲವು ತಲಾಂತರಗಳ ಸಂಬಂದವು ಆ ಮಗುವಿಗೆ ಇದೆಯೆಂದು, ಮಗುವಿಗೆ ಶರೀರ ತಾಯಿ ತಂದೆಯರ ಭೌತಿಕ ಸಂಬಂಧ ರೂಪು ರೇಖೆಗಳ ಹೋಲಿಕೆಗಳೆ ಅಲ್ಲದೆ, ಅಭೌತಿಕವಾದ ಗುಣಗಳು ಮತ್ತು ಆಚಾರ ವ್ಯವಹಾರಗಳಿರುವುದಾಗಿ, ಅದರಿಂದ ಒಂದು ಮಗು ಭೌತಿಕವಾಗಿ, ಅಭೌತಿಕವಾಗಿ ಕಾಣಿಸುವ ತಾಯಿ ತಂದೆಯರಿಗೆ ಸಂಬಂಧಿಸಿದವನೆಂದು ಶಾಸ್ತ್ರಬದ್ಧವಾಗಿ ಹೇಳಬಹುದೆಂದು, ಹಾಗಲ್ಲದೆ ತಾಯಿ ತಂದೆಯರು ಪ್ರಕೃತಿ ಪರಮಾತ್ಮರೆಂದೆನ್ನುವುದು ಅಶಾಸ್ತ್ರೀಯವೆಂದು ಹೇಳುವುದಕ್ಕೆ ಅವಕಾಶವಿದೆ. ಅಂತಹದರಲ್ಲಿ ನಿಮ್ಮ ಮಾತು ಸತ್ಯ ಹೇಗೆ ಆಗುತ್ತದೆಂದು ನಮ್ಮನ್ನು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ವೇನೆಂದರೆ!

ಭೂಮಿ ಮೇಲಿರುವ ಆರು ಶಾಸ್ತ್ರಗಳಲ್ಲಿ ಭೌತಿಕ ಶಾಸ್ತ್ರವು ಸಹ ಒಂದು. ಯಾವುದೇ ಶಾಸ್ತ್ರವಾದರೂ ಎಂದಿಗೂ ಖಂಡಿಸಲಾಗದು. ಖಂಡಿಸಲಾಗದ ಶಾಸನವಾಗಿ ಇರುವುದೇ ಶಾಸ್ತ್ರವೊಂದರ ಪ್ರತ್ಯೇಕತೆಯೆಂದು ನಾವೂ ಸಹ ಹೇಳುತ್ತಿದ್ದೇವೆ. ಷಟ್ ಶಾಸ್ತ್ರಗಳಲ್ಲಿ ಉಳಿದ ಐದು ಶಾಸ್ತ್ರಗಳಿಗಿಂತ

ದೊಡ್ಡದು ಬ್ರಹ್ಮವಿದ್ಯಾ ಶಾಸ್ತ್ರ. ನನ್ನ ವಾದ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿದ್ದು. ಉಳಿದವರ ವಾದನೆ ಭೌತಿಕ ಶಾಸ್ತ್ರಕ್ಕೆ ಸಂಬಂಧಿಸಿದ್ದು. ಶಾಸ್ತ್ರಬದ್ದವಾದ ಯಾವುದೇ ವಾದವಾದರೂ ಸತ್ಯವೇ. ಈಗ ಕೆಲವರು ವಿಜ್ಞಾನಿಗಳು ಭೌತಿಕ ಶಾಸ್ತ್ರದ ಪ್ರಕಾರ, ಅಭೌತಿಕವಾದ ಕಾಣಿಸದ ಗುಣಗಳು ಸಹ ಅವರವರ ವಂಶವನ್ನು ಅನುಸರಿಸಿ ಬರುತ್ತಿವೆ ಎಂದು, ಆದ್ದರಿಂದ ಭೌತಿಕವಾಗಿ, ಅಭೌತಿಕವಾಗಿ ಎರಡು ವಿಧಗಳ ಒಂದು ಮಗುವಿಗೆ ಕಾಣಿಸುವ ತಾಯಿ ತಂದೆಯರೇ ನಿಜವಾದ ತಾಯಿ ತಂದೆಯರೆಂದು ಹೇಳುವುದು ಶಾಸ್ತ್ರಬದ್ದವೇಯೆಂದು ನಾನು ಸಹ ಒಪ್ಪಿಕೊಳ್ಳುತ್ತಿದ್ದೇನೆ. ಆದರೆ ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ! ತಾಯಿ ತಂದೆಯರಿಂದ ವ್ಯಾಪಿಸಿದ ಡಿ.ಎನ್.ಎ (ಜೀನ್ಸ್) ಸಹ ಭೌತಿಕವಾದದ್ದೇ ಎಂದು, ಜೀನ್ಸ್‌ಗೆ ಹುರಿತಿರುಗಿದ ಏಣಿಯಂತಹ ಆಕಾರವಿದೆಯೆಂದು, ತಾಯಿ ಅಂಡದೊಳಗಿನ ಮತ್ತು ತಂದೆ ವೀರ್ಯದೊಳಗಿನ ಕ್ರೋಮೋ ಜೋಮ್ಸ್‌ನಿಂದ ಅವರ ವಂಶ ಪಾರಂಪರ್ಯ ಜೀನ್ಸ್ (D.N.A) ತಯಾರಾಗುತ್ತಿದೆಯೆಂದು, ವಂಶ ಪಾರಂಪರ್ಯ ಗುಣಗಳ ಆಚರಣೆಗಳು ಸಹ ಭೌತಿಕವಾದವುಗಳೇ ಎಂದು ತಿಳಿಯುತ್ತಿದೆ. ಇನ್ನು ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ನೋಡಿದರೆ ಮನುಷ್ಯನಲ್ಲಿನ ಜೀನ್ಸ್ ಆಗಲಿ, ವಂಶ ಪಾರಂಪರ್ಯವಾಗಲಿ ಬ್ರಹ್ಮ ವಿದ್ಯೆಗೆ ಸಂಬಂಧವಿಲ್ಲ. ತಂದೆಯ ವೀರ್ಯಕಣವಾಗಲಿ, ತಾಯಿಯ ರಜೋಕಣ (ಅಂಡ) ವಾಗಲಿ, ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿರುವವಲ್ಲ. ಅವು ಕೇವಲ ಭೌತಿಕ ಶಾಸ್ತ್ರಕ್ಕೆ ಸಂಬಂಧಿಸಿರುವವು ಮಾತ್ರವೆ. ಭೌತಿಕ ಶಾಸ್ತ್ರಕ್ಕೆ ಸಂಬಂಧಿಸಿರುವವರೆಗು ಒಬ್ಬ ಮನುಷ್ಯನಿಗೆ ಭೌತಿಕ ತಾಯಿ ತಂದೆಯಿರುವುದು ವಾಸ್ತವವೆ. ಮತ್ತು ಅವರ ವಂಶ ಪಾರಂಪರ್ಯ ಸಂಬಂಧ ಇರುವುದು ಸಹ ವಾಸ್ತವವೆ. ಆದರೆ ಇಲ್ಲಿ ಸ್ವಲ್ಪ ಗಮನಿಸಬೇಕಾದ ವಿಷಯವೇನೆಂದರೆ!

ಶರೀರದಲ್ಲಿನ ಜೀವಾತ್ಮನಿಗೆ ಕರ್ಮ ಎನ್ನುವುದು ಒಂದಿದೆ. ಒಬ್ಬ ಜೀವಿಯು ತನ್ನ ಕರ್ಮಾನುಸಾರ ತನಗೆ ಹತ್ತಿರ ಸಂಬಂಧ ಕರ್ಮ ಇರುವವರ ಗೃಹದೊಳಗೇ ಹುಟ್ಟುತ್ತಿರುವನು. ಜೀವಾತ್ಮನಿಗಿರುವ ಕರ್ಮವೇ ಆ ವಿಧವಾಗಿ

ಒಂದು ವಂಶದಲ್ಲಿ ಹುಟ್ಟಿಸುತ್ತಿದೆ. ಪ್ರಪಂಚದಲ್ಲಿ ಎಷ್ಟೋ ವಿಧ ಕರ್ಮಗಳಿರುವವರಿದ್ದಾರೆ. ಅವರವರ ಕರ್ಮಗಳು ಅವರನ್ನು ಮರು ಜನ್ಮಕ್ಕೆ ತೆಗೆದುಕೊಂಡು ಹೋಗುತ್ತವೆ. ಹಾಗೆ ತೆಗೆದುಕೊಂಡು ಹೋದಾಗ ಸುಮಾರು ಅಂತಹ ಕರ್ಮವಿರುವವರ ವಂಶದೊಳಗೇ ಹುಟ್ಟಿಸುತ್ತವೆ. ಆದ್ದರಿಂದ ಗತದಲ್ಲಿ ತಮ್ಮ ಹಿರಿಯರು ಕರ್ಮಪ್ರಕಾರ ಮಾಡಿದ ಕೆಲಸಗಳನ್ನೇ ನಂತರ ಹುಟ್ಟಿದವರು ಸಹ ಅಂತಹ ಕರ್ಮಗಳ ಪ್ರಕಾರ, ಅಂತಹ ಕೆಲಸಗಳನ್ನೇ ಮಾಡುವುದರಿಂದ ನೋಡುವವರು ಇವನಿಗೆ ತಾತನ ಬುದ್ಧಿ ಬಂದಿದೆಯೆಂದು, ಅಥವಾ ಇವನಿಗೆ ಮುತ್ತಾತನ ಬುದ್ಧಿಗಳು ಬಂದಿವೆಯೆಂದು, ತಂದೆಯ ಬುದ್ಧಿಗಳು ಬಂದಿವೆಯೆಂದು ಅನ್ನುತ್ತಿರುತ್ತಾರೆ. ಕರ್ಮಗಳನ್ನನುಸರಿಸಿ ಮನೋಬುದ್ಧಿ, ಚಿತ್ತಗಳು ಕೆಲಸ ಮಾಡುತ್ತವೆಂದು ತಿಳಿಯದೆ ಕೆಲಸ ಮಾಡುವ ಬುದ್ಧಿಯನ್ನು, ತಾತನದು ಅಥವಾ ಮುತ್ತಾತನದ್ದು ಎನ್ನುತ್ತಿರುತ್ತಾರೆ. ಈ ವಿಧವಾಗಿ ಹೊರಗೆ ಕಾಣಿಸುವ ಕಾರ್ಯಗಳನ್ನನುಸರಿಸಿ ಒಬ್ಬ ಮನುಷ್ಯ ಒಂದು ವಂಶಕ್ಕೆ ಸೇರಿದವನೆಂದು, ಇಂತಹವರ ತಂದೆಯ ಮಗನೆಂದು ಅನ್ನುತ್ತಿರುತ್ತಾರೆ. ಇವೆಲ್ಲವೂ ಭೌತಿಕ ತಾಯಿ ತಂದೆಯರನ್ನು ತೋರಿಸುತ್ತಾ ಮನುಷ್ಯನಿಗೆ ತಾನು ಯಾರೋ, ತನ್ನ ನಿಜಸ್ಥಿತಿ ಏನೆಂದು ತಿಳಿಯದಂತೆ ಮಾಡುತ್ತಿವೆ. ಒಬ್ಬ ಮನುಷ್ಯನನ್ನು ವಿಭಜಿಸಿ ನೋಡಿದರೆ ಶರೀರ ಬೇರೆ ಎಂದು, ಜೀವಾತ್ಮನು ಬೇರೆ ಎಂದು ತಿಳಿಯುತ್ತದೆ. ಹಾಗೆ ಶರೀರದಲ್ಲಿ ಜೀವಾತ್ಮನು, ಕರ್ಮ ಬೇರೆ ಬೇರೆಯಾಗಿ ಇದ್ದಾರೆ. ಜೀವಾತ್ಮನು ತನ್ನ ಜೀವನದಲ್ಲಿ ಕರ್ಮವನ್ನು ಸಂಪಾದಿಸಿಕೊಳ್ಳುತ್ತಿದ್ದಾನೆ ಮತ್ತು ಅನುಭವಿಸುತ್ತಿದ್ದಾನೆ. ಕಳೆದ ಜನ್ಮಗಳಲ್ಲಿ ಸಂಪಾದಿಸಿಕೊಂಡ ಕರ್ಮ ಪ್ರಕಾರ ಜೀವಿಯು ಜೀವನವನ್ನು ಕಳೆಯಬೇಕಾಗಿದೆ. ಪ್ರತಿ ಕೆಲಸಕ್ಕೂ ಕರ್ಮವೇ ಕಾರಣವಾಗಿ, ನಡೆಯುವ ಕೆಲಸದಲ್ಲಿ ಕಷ್ಟ ಸುಖಗಳನ್ನು ಜೀವಿಯೆ ಅನುಭವಿಸುತ್ತಿರುವನು. ಅಷ್ಟೇ ವಿನಃ ನಡೆಯುವ ಕೆಲಸವನ್ನನುಸರಿಸಿಯಾಗಲಿ, ಅವನಿಗಿರುವ ಕರ್ಮವನ್ನನುಸರಿಸಿಯಾಗಲಿ, ಜೀವಿಯು ಇಂತಹವರಿಗೆ ಸಂಬಂಧಿಸಿದವನೆಂದು ಹೇಳಲಾರೆವು. ಅಷ್ಟೇ ಅಲ್ಲದೆ ಜೀವಿಯ ರೂಪ

ರೇಖೆಗಳಾಗಲಿ, ಜೀವಿಯು ಯಾವ ಪದಾರ್ಥದಿಂದ ಕೂಡಿಕೊಂಡಿದ್ದಾನೆಂದಾಗಲಿ, ಜೀವಿ ಎಂದರೆ ಏನು? ಯಾರು? ಎನ್ನುವ ವಿಷಯವನ್ನಾಗಲಿ ಹೇಳಲಾರೆವು. ನಡೆಯುತ್ತಿರುವ ಕರ್ಮವನ್ನನುಸರಿಸಿ, ಕೆಲಸಗಳನ್ನನುಸರಿಸಿ ಒಬ್ಬ ವ್ಯಕ್ತಿಯ ಭೌತಿಕ ತಾಯಿ ತಂದೆಯರನ್ನು, ಆತನ ವಂಶವನ್ನು ಹೇಳಬಹುದು. ಆದರೆ ಆತನಲ್ಲಿ ಜೀವಿಯ ಅಂಶವನ್ನಾಗಲಿ ಆಕಾರವನ್ನಾಗಲಿ ಹೇಳಲಾರೆವು.

ಭೂಮಿ ಮೇಲಿರುವವು ಷಟ್ ಶಾಸ್ತ್ರಗಳು (ಆರು ಶಾಸ್ತ್ರಗಳು) ಮಾತ್ರವೆ. ಅದರಲ್ಲಿ ಐದು ಶಾಸ್ತ್ರಗಳು ಜನರಲ್ ಸೈನ್ಸ್‌ಗೆ ಸಂಬಂಧಿಸಿರುವವು. ಜನರಲ್ ಸೈನ್ಸ್ ಎಂದರೆ ಸಾಮಾನ್ಯ ಶಾಸ್ತ್ರ. ಹಾಗೆ ಸೂಪರ್ ಸೈನ್ಸ್ ಒಂದು ಇದೆ. ಸೂಪರ್ ಸೈನ್ಸ್ ಎಂದರೆ ಬ್ರಹ್ಮಶಾಸ್ತ್ರ ಅಥವಾ ದೊಡ್ಡ ಶಾಸ್ತ್ರವೆಂದು ಎನ್ನಬಹುದು. ಬ್ರಹ್ಮ ಎಂದರೆ ದೊಡ್ಡ ಎಂದು ಮಾತ್ರವೆ ಅರ್ಥ. ಸೈನ್ಸನ್ನು ವಿಜ್ಞಾನ ಎಂದು ಎನ್ನಬಹುದು. ಆರು ಶಾಸ್ತ್ರಗಳಲ್ಲಿ ಐದು ಶಾಸ್ತ್ರಗಳು ಎಂದರೆ ಒಂದು ಗಣಿತಶಾಸ್ತ್ರ, ಎರಡು ಖಗೋಳಶಾಸ್ತ್ರ, ಮೂರು ರಸಾಯನ ಶಾಸ್ತ್ರ, ನಾಲ್ಕು ಭೌತಿಕಶಾಸ್ತ್ರ, ಐದು ಜ್ಯೋತಿಷ್ಯ ಶಾಸ್ತ್ರ. ಈ ಐದು ಶಾಸ್ತ್ರಗಳಿಗಿಂತ ಮೊದಲು ಹುಟ್ಟಿರುವುದು ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರ ಅಥವಾ ಬ್ರಹ್ಮ ಶಾಸ್ತ್ರ ಎಂದು ಹೇಳಬಹುದು. ಪ್ರಪಂಚದಲ್ಲಿ ಯಾವುದೇ ವಿಷಯವಾಗಲಿ ಶಾಸ್ತ್ರ ಪ್ರಮಾಣವಾಗಿರಬೇಕು. ಶಾಸ್ತ್ರ ಪ್ರಮಾಣ ಇಲ್ಲದಿದ್ದರೆ ಅದನ್ನು ಅಸತ್ಯವಾಗಿ ಲೆಕ್ಕಿಸಲಾಗುತ್ತದೆ. ಆದ್ದರಿಂದ ಒಂದು ವಿಷಯವನ್ನು ಸತ್ಯವೆಂದು ಹೇಳುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯಕತೆಯೋ, ಹಾಗೇ ಒಂದು ವಿಷಯವನ್ನು ಅಸತ್ಯವೆಂದು ಹೇಳುವುದಕ್ಕೂ ಸಹ ಶಾಸ್ತ್ರವು ಅಷ್ಟೇ ಅವಶ್ಯಕತೆ ಎನ್ನುವ ಸೂತ್ರದ ಪ್ರಕಾರ ಯಾವುದು ಸತ್ಯವೋ, ಯಾವುದು ಅಸತ್ಯವೋ ಶಾಸ್ತ್ರದ ಆಧಾರದಿಂದ ನಿರ್ಣಯಿಸಿ ಹೇಳಬಹುದು. ಶಾಸ್ತ್ರದ ಪ್ರಕಾರ ಹೇಳದ ವಿಷಯವು ಸತ್ಯವಾಗಬಹುದು ಅಥವಾ ಅಸತ್ಯವಾಗಬಹುದು. ಹಾಗೆ ಹೇಳುವುದು ಕುರುಡರಾಗಿ ಹೇಳಿದಂತಾಗುತ್ತದೆ. ಆದ್ದರಿಂದ ಯಾವುದೇ ವಿಷಯವನ್ನಾಗಲಿ ಸತ್ಯವೋ, ಅಸತ್ಯವೋ ಎಂದು ನೋಡುವುದಕ್ಕೆ ಶಾಸ್ತ್ರವು ಕಣ್ಣಿನಂತಹದೆಂದು ಹೇಳಬಹುದು.

ಪ್ರಪಂಚದಲ್ಲಿ ಆರು ಶಾಸ್ತ್ರಗಳಲ್ಲಿ ಐದು ಸಾಮಾನ್ಯ ಶಾಸ್ತ್ರಗಳಾದಾಗ ಒಂದು ಅಸಾಮಾನ್ಯವಾದ ದೊಡ್ಡ ಶಾಸ್ತ್ರವೆಂದು ಹೇಳಿಕೊಂಡಿದ್ದೇವಲ್ಲವೆ! ದೊಡ್ಡ ಶಾಸ್ತ್ರವಾದ ಭಗವದ್ಗೀತೆಯಲ್ಲಿಯೂ ಸಹ ಒಂದು ಜನ್ಮದಲ್ಲಿನ ಸಂಸ್ಕಾರವನ್ನನುಸರಿಸಿ ಮರುಜನ್ಮದಲ್ಲಿನ ಭೌತಿಕ ತಾಯಿ ತಂದೆಯರು ಇರುತ್ತಾರೆಂದು ಹೇಳುವುದು ನಡೆದಿದೆ. ಎಂತಹವರು ಅಂತಹ ಅಭ್ಯಾಸಗಳು, ಆಲೋಚನೆಗಳು, ಆಚಾರಗಳಿರುವವರ ಮನೆಯಲ್ಲಿ ಹುಟ್ಟುತ್ತಾರೆಂದು ಗೀತೆಯಲ್ಲಿ ಕೃಷ್ಣ ಭಗವಾನನು ಸಹ ಹೇಳಿದ್ದಾನೆ. ಭಗವದ್ಗೀತೆ ಆತ್ಮ ಸಂಯಮ ಯೋಗ 41, 42 ಶ್ಲೋಕಗಳು.

***ಶ್ಲೋ.41. ಪ್ರಾಪ್ಯಪುಣ್ಯ ಕೃತಾಂ ಲೋಕಾನುಷಿತ್ವಾ ಶಾಶ್ವತೀ ಸ್ಸಮಾಃ,***
***ಶುಚೀನಾಮ್ ಶ್ರೀಮತಾಮ್ ಗೇಹೇ ಯೋಗ ಭ್ರಷ್ಟೋಭಿ ಜಾಯತೇ॥***

***ಶ್ಲೋ.42. ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್,***
***ಏತದ್ಧಿ ದುರ್ಲಭತರಂ ಲೋಕೇಜನ್ಮ ಯಧೀದೃಶಮ್.***

**ಭಾವಾರ್ಥ :** ಹಿಂದಿನ ಜನ್ಮದಲ್ಲಿ ಯೋಗ ಭ್ರಷ್ಟರಾದವರು ಅವರಿಗಿರುವ ಪುಣ್ಯ ಫಲಗಳನ್ನು ಅನುಭವಿಸಿದ ನಂತರ ಒಳ್ಳೆಯ ಆಚಾರಗಳಿರುವ ಶ್ರೀಮತರು (ಜ್ಞಾನಿಗಳು) ಆದಂತಹವರ ಗೃಹದಲ್ಲಿ ಹುಟ್ಟುತ್ತಾರೆ. ಹಾಗಲ್ಲದೆ ಹೋದರೆ ದೈವ ಜ್ಞಾನದಲ್ಲಿ ಒಳ್ಳೆಯ ಮೇಧಾವಿಗಳಾದ ಯೋಗಿಗಳ ವಂಶದಲ್ಲಾದರೂ ಹುಟ್ಟುತ್ತಾರೆ. ಲೋಕದಲ್ಲಿ ಅಂತಹ ಜನ್ಮ ಹೊಂದುವುದು ಎಷ್ಟೋ ದುರ್ಲಭವಾದದ್ದು.

ಇದರಿಂದ ಗತ ಜನ್ಮದಲ್ಲಿ ಜ್ಞಾನಿಗಳಾದವರು ಜ್ಞಾನಿಗಳ ಹತ್ತಿರ, ಯೋಗಿಯಾದವರು ಯೋಗಿಗಳ ಹತ್ತಿರ ಅವರ ವಂಶಗಳಲ್ಲಿ ಜನ್ಮಿಸುತ್ತಿದ್ದಾರೆಂದು ತಿಳಿಯುತ್ತಿದೆ. ಈ ವಿಷಯವು ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯಲ್ಲಿ ಹೇಳಿರುವುದರಿಂದ ಪೂರ್ತಿ ಸತ್ಯವಾಗಿ ತಿಳಿದಿದೆ. ಅಷ್ಟೇ ಅಲ್ಲದೆ ಪ್ರತ್ಯಕ್ಷವಾಗಿ ನಡೆಯುತ್ತಿದೆಯೆಂದು ಸಹ ತಿಳಿದು ಹೋಗಿದೆ.

ಒಬ್ಬ ಮನುಷ್ಯ ಎಂತಹ ಆಚಾರ ವ್ಯವಹಾರಗಳ ಮೇಲೆ ಶ್ರದ್ದೆಯಿಂದ ಇರುತ್ತಾನೋ, ಅಂತಹ ಭಾವನೆ ಇರುವ ಮನೆಯಲ್ಲಿ ಹುಟ್ಟುವುದರಿಂದ, ತಂದೆಗೆ ತಾತನಿಗೆ ಇರುವ ಭಾವನೆಗಳೇ ಇರುವುದರಿಂದ, ಆ ವ್ಯಕ್ತಿ ಇಂತಹವರ ಮೊಮ್ಮಗ, ಇಂತಹವರ ಮಗ ಎಂದು ಹೇಳುವುದಕ್ಕೆ ಬಲ ಏರ್ಪಡುತ್ತದೆ. ಇಂತಹ ಬಲವಾದ ಸ್ವಲ್ಪ ಹೊರಗಿನ ಆಧಾರಗಳನ್ನನುಸರಿಸಿ ಒಬ್ಬ ಮನುಷ್ಯ ನಾನು ಇಂತಹವರಿಗೆ ಹುಟ್ಟಿದವನೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಆದ್ದರಿಂದ ಪ್ರತಿ ಮನುಷ್ಯ ಹೊರಗಡೆ ಪ್ರತ್ಯಕ್ಷವಾಗಿರುವ ತಾಯಿ ತಂದೆಯರನ್ನೇ ತನ್ನ ತಾಯಿ ತಂದೆಯರೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಆದರೆ ವಾಸ್ತವವಾಗಿ ಇದೆಲ್ಲವು ಹೊರ ವ್ಯವಹಾರಗಳಿಗೆ ಸಂಬಂಧಿಸಿದ ವಿಷಯವೆಂದು, ಆಚಾರ ವ್ಯವಹಾರಗಳು ಗುಣಗಳ ಶ್ರದ್ಧೆಯನ್ನನುಸರಿಸಿ ಬರುತ್ತವೆಂದು, ಗುಣಗಳು ಮತ್ತು ಅವುಗಳ ಆಚಾರಗಳು ಬೇರೆ, ಜೀವಿಯು ಬೇರೆಯೆಂದು, ಜೀವಿಯು ಆತ್ಮಕ್ಕೆ ಸಂಬಂಧಿಸಿದವನೆಂದು, ಜೀವಿಯು ಗುಣಗಳಿಗೆ ಸಂಬಂಧಿಸಿದವನಲ್ಲ ವೆಂದು, ಯಾರೂ ತಿಳಿಯದೆ ಹೋಗುತ್ತಿದ್ದಾರೆ. ಆದ್ದರಿಂದ ಶರೀರಕ್ಕೆ ಸಂಬಂಧಿಸಿದ ತಾಯಿ ತಂದೆಯರನ್ನೆ ತನ್ನ ತಾಯಿತಂದೆಯರಾಗಿ ಮನುಷ್ಯ ಭಾವಿಸುತ್ತಿದ್ದಾನೆ. ಒಂದು ಶರೀರ ಹೋಲಿಕೆಗಳನ್ನನುಸರಿಸಿ ಎರಡು ಆಚಾರ ಹವ್ಯಾಸಗಳನ್ನನುಸರಿಸಿ, ಎರಡು ವಿಧಗಳ ಕಾರಣಗಳಿಂದ ಪ್ರತಿ ಮನುಷ್ಯ ತಾಯಿ ತಂದೆಯರ ವಿಷಯದಲ್ಲಿ ತಪ್ಪಾಗಿ ಅರ್ಥೈಸಿಕೊಂಡು ತನ್ನ ಶರೀರ ತಾಯಿ ತಂದೆಯರನ್ನೇ ತನ್ನ ತಾಯಿ ತಂದೆಯರೆಂದು ಅಂದುಕೊಳ್ಳುವುದು ನಡೆಯುತ್ತಿದೆ. ತನಗೆ ಎರಡು ವಿಧಗಳ ತಾಯಿ ತಂದೆಯರಿದ್ದಾರೆಂದು, ಒಬ್ಬರು ತನಗೆ (ಜೀವಾತ್ಮನಿಗೆ) ಸಂಬಂಧಿಸಿದವರೆಂದು, ಎರಡನೆಯವರು ತನ್ನ ಶರೀರಕ್ಕೆ ಸಂಬಂಧಿಸಿದವರೆಂದು, ತನಗೆ ಸಂಬಂಧಿಸಿದವರು ಸೃಷ್ಠಿ ಆದಿಯಿಂದ ಒಂದೇ ತಾಯಿ ತಂದೆಯರಾಗಿ, ಶಾಶ್ವತ ತಾಯಿ ತಂದೆಯರಾಗಿ ಇದ್ದಾರೆಂದು, ತನ್ನ ಶರೀರಕ್ಕೆ ಸಂಬಂಧಿಸಿದವರು ಜನ್ಮ ಜನ್ಮಕ್ಕೂ ಬೇರೆ ಬೇರೆ ತಾಯಿ ತಂದೆಯರು ಇದ್ದಾರೆಂದು ಯಾರು ತಿಳಿದುಕೊಳ್ಳುವುದಿಲ್ಲ.

ಸರ್ವಸಾಧಾರಣ ಮನುಷ್ಯರಿಗೆ, ಕಾಣಿಸುವ ತಾಯಿ ತಂದೆಯರು ಮಾತ್ರವೇ ತಿಳಿದು, ಕಾಣಿಸದ ತಾಯಿ ತಂದೆಯರು ತಿಳಿಯದೇ ಹೋಗಬಹುದು. ತಾಯಿ ತಂದೆಯರು ಎರಡು ವಿಧಗಳಾಗಿ ಇದ್ದಾರೆಂದು ಸಹ ಅವರಿಗೆ ತಿಳಿಯದೆಂದೇ ಹೇಳಬಹುದು. ಆದರೆ ದೈವ ಜ್ಞಾನವು ತಿಳಿದ ಜ್ಞಾನಿಗಳಿಗೂ, ಯೋಗಿಗಳಿಗೂ ಎರಡನೇ ವಿಧವಾದ ಪ್ರಕೃತಿ ಪರಮಾತ್ಮರು ತಾಯಿ ತಂದೆಯ ರಾಗಿ ಇದ್ದಾರೆಂದು ತಿಳಿದಿರುತ್ತದೆ. ಜ್ಞಾನ ತಿಳಿದವರಿಗೆ ಜನ್ಮ ಜನ್ಮಕ್ಕೂ ಶಾಶ್ವತ ತಾಯಿ ತಂದೆಯರಾದವರ ವಿಷಯವು ತಿಳಿಯುವುದರಿಂದ, ತನ್ನ ಶರೀರ ತಾಯಿ ತಂದೆಯರನ್ನು ಬಹಳ ಸ್ವಲ್ಪವಾದವರೆಂದು, ಒಂದು ಜನ್ಮಕ್ಕೆ ಮಾತ್ರವೆ ಪರಿಮಿತವಾದವರೆಂದು ಭಾವಿಸುತ್ತಾರೆ. ಅಂತಹದರಲ್ಲಿ ಜ್ಞಾನ ತಿಳಿದ ವ್ಯಕ್ತಿ ತನ್ನ ಶರೀರ ತಾಯಿ ತಂದೆಯರನ್ನು ಗೌರವಿಸುತ್ತಾನಾ? ಅವರನ್ನು ವೃದ್ಧಾಪ್ಯದಲ್ಲಿ ಪೋಷಿಸುತ್ತಾನಾ? ಎನ್ನುವ ಪ್ರಶ್ನೆಗಳು ಬರಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ! ಶರೀರ ತಾಯಿ ತಂದೆಯರು ತನ್ನ ಶರೀರವನ್ನು ಹುಟ್ಟಿದಾಗಿನಿಂದ ಪೋಷಿಸುತ್ತಿದ್ದಾರೆ. ನನ್ನ ಮಗ ಎನ್ನುವ ಮೋಹ ಗುಣದಿಂದ ತಮಗೆ ಹುಟ್ಟಿದ ಮಗುವನ್ನು ಬೆಳೆಸಿ ಪೋಷಿಸುವುದು ಎಲ್ಲರಿಗೂ ತಿಳಿದ ವಿಷಯವೇ. ಜ್ಞಾನವು ತಿಳಿದ ವ್ಯಕ್ತಿ ತನ್ನ ಶರೀರ ತಾಯಿ ತಂದೆಯರನ್ನು, ತನ್ನ ಶರೀರವನ್ನು ಪೋಷಿಸಿದ ಅತ್ಯಂತ ಸನ್ನಿಹಿತರಾಗಿ ಗುರುತಿಸಿ, ಅದಕ್ಕೆ ಬದುಲು ಅವರ ಶರೀರವನ್ನು ಸಹ ಪೋಷಿಸುವುದು ಮುಖ್ಯವಾದ ಕರ್ತವ್ಯವೆಂದು ಭಾವಿಸಬೇಕು. ತನ್ನ ಚಿಕ್ಕಂದಿನಿಂದಲೇ ತನಗೆ ಎಷ್ಟು ಜವಾಬ್ದಾರಿಯಿಂದ ವಿದ್ಯಾ ಬುದ್ಧಿ ಹೇಳಿಕೊಟ್ಟಿದ್ದಾರೋ, ಎಷ್ಟು ಪ್ರೇಮದಿಂದ ತನ್ನನ್ನು ಬೆಳೆಸಿದ್ದಾರೊ, ತನಗೆ ಹಸಿವಾಗದಂತೆ ಹೊತ್ತು ಹೊತ್ತಿಗು ಹೇಗೆ ಆಹಾರವನ್ನು ಒದಗಿಸಿದ್ದಾರೋ, ಹಾಗೇ ಎಲ್ಲಾ ವಿಧಗಳಲ್ಲಿ ತಾಯಿ ತಂದೆಯರನ್ನು ಜಾಗ್ರತೆಯಿಂದ ನೋಡಿಕೊಳ್ಳಬೇಕಾಗಿ ಜ್ಞಾನತಿಳಿದ ವ್ಯಕ್ತಿ ಅಂದುಕೊಳ್ಳುವನು. ಜ್ಞಾನಿ ಅಥವಾ ಯೋಗಿ ಆದವನು ತನ್ನ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮ ಎಂದಿಗೂ ವೃದ್ಧರಾಗುವುದಿಲ್ಲವೆಂದು, ತಾನು ಎಂದಿಗೂ ದೊಡ್ಡವನಾಗಿ

ಬೆಳೆಯುವವನಲ್ಲವೆಂದು, ತಾನು ಶಾಶ್ವತವಾಗಿ ಪ್ರಕೃತಿ ತಾಯಿಯ ಮಡಿಲಲ್ಲಿ ಹಸುಕಂದನೆಂದು, ಅಂತಹದರಲ್ಲಿ ತಂದೆ ಪರಮಾತ್ಮ ತಾಯಿ ಪ್ರಕೃತಿಯೇ ಯಾವಾಗಲು ತನ್ನನ್ನು ಪೋಷಿಸುತ್ತಿದ್ದಾರೆಂದು, ತಾನು ಅವರನ್ನು ಪೋಷಿಸುವ ಸ್ಥಿತಿಗೆ ಬೆಳೆಯುವುದಿಲ್ಲವೆಂದು ತಿಳಿದಿರುತ್ತಾನೆ.

ಶರೀರ ತಾಯಿ ತಂದೆಯರು ಮಾತ್ರ ಮುದುಕರಾದಾಗ, ತನಗೆ ವಯಸ್ಸು ಬಂದಿರುವವನಾಗಿ ಅವರನ್ನು ಪೋಷಿಸುವ ಸಾಮರ್ಥ್ಯ ಹೊಂದಿರುತ್ತಾನೆ. ಆದ್ದರಿಂದ ತನ್ನ ತಾಯಿ ತಂದೆಯರನ್ನು ಬಿಟ್ಟು, ತನ್ನ ಶರೀರ ತಾಯಿ ತಂದೆಯರನ್ನು ಪೋಷಿಸುವುದೇ ಆ ಜನ್ಮಕ್ಕಿರುವ ಕೆಲಸವಾಗಿ, ನ್ಯಾಯವಾದ ಕೆಲಸವಾಗಿ ಜ್ಞಾನಿ ಗುರುತಿಸಿ, ತನ್ನ ಶರೀರ ತಾಯಿ ತಂದೆಯರಿಗೆ ಎಂತಹ ಅಸೌಕರ್ಯ ಇಲ್ಲದಂತೆ ನೋಡಿಕೊಳ್ಳಬೇಕೆಂದು ತಿಳಿಯುತ್ತಾನೆ. ಜ್ಞಾನ ತಿಳಿದ ವ್ಯಕ್ತಿ ತನಗೆ ಪ್ರಕೃತಿ ಪರಮಾತ್ಮ ತಾಯಿ ತಂದೆಯರೆಂದು ತಿಳಿದರೂ, ಶರೀರ ತಾಯಿ ತಂದೆಯರನ್ನು ಅಶ್ರದ್ಧೆ ಮಾಡುವುದಿಲ್ಲ. ತನ್ನನ್ನು ಚಿಕ್ಕಂದಿನಿಂದಲೇ ಅವರು ತನ್ನ ಶರೀರವನ್ನು ಪೋಷಿಸಿರುವುದರಿಂದ, ವೃದ್ಧಾಪ್ಯದಲ್ಲಿ ಅವರ ಶರೀರವನ್ನು ಪೋಷಿಸುವುದು ತನ್ನ ಕರ್ತವ್ಯವೆಂದು ಲೆಕ್ಕಿಸುವನು. ಯೋಗಿ ಅಥವಾ ಜ್ಞಾನಿ ಆದವನು ತನ್ನ ತಾಯಿ ತಂದೆಯರ ಮೇಲೆ ಎಷ್ಟು ಭಕ್ತಿ ಇದ್ದರೂ, ತನ್ನ ಶರೀರ ತಾಯಿ ತಂದೆಯರ ಬಗ್ಗೆ ಮಾತ್ರ ಜವಾಬ್ದಾರಿ ರಹಿತನಾಗಿ ಪ್ರವರ್ತಿಸುವುದಿಲ್ಲ. ತನ್ನ ಶರೀರವನ್ನು ಪೋಷಿಸಿದ್ದರ ಬದುಲಿಗೆ, ಅವರ ಶರೀರ ಪೋಷಣೆ ಮಾಡುವುದು ತನಗೆ ಮುಖ್ಯವಾದ ಕಾರ್ಯವಾಗಿ ತಿಳಿಯುತ್ತಾನೆ. ಪ್ರಪಂಚದಲ್ಲಿ ಜ್ಞಾನವಿಲ್ಲದ ಸಾಧಾರಣ ವ್ಯಕ್ತಿಗಳು ಅವರ ತಾಯಿ ತಂದೆಯರನ್ನು ಪೋಷಿಸದೆ ಕೊನೆಗೆ ಅವರ ಆಸ್ತಿಗಳನ್ನು ಆಭರಣಗಳನ್ನು ಕಸಿದುಕೊಳ್ಳುವವರು ಇದ್ದಾರೆ. ವೃದ್ಧರಾದ ತಮ್ಮ ತಾಯಿ ತಂದೆಯರು ಸತ್ತು ಹೋದರೆ ಇದ್ದ ಆಸ್ತಿಯನ್ನೆಲ್ಲಾ ಇಷ್ಟ ಬಂದಹಾಗೆ ಬಳಸಿಕೊಳ್ಳಬಹುದೆಂದು ಅವರನ್ನು ಸಾಯಿಸುವವರೂ ಇದ್ದಾರೆ. ಅವರ ಆಸ್ತಿಯನ್ನು ಅನುಭವಿಸುತ್ತಾ ತಾಯಿ ತಂದೆಯರನ್ನು ಬೀದಿ ಪಾಲು ಮಾಡಿದವರೂ ಇದ್ದಾರೆ. ಈ ವಿಧವಾಗಿ

ಜ್ಞಾನವಿಲ್ಲದೆ ಕೆಲವರು ತಮ್ಮ ತಾಯಿ ತಂದೆಯರನ್ನು ಎಷ್ಟೋ ವಿಧವಾಗಿ ನೋಯಿಸುವವರು ಇದ್ದಾರೆ. ಆದರೆ ಯೋಗಿಗಳು, ಜ್ಞಾನಿಗಳು ಆದವರು ಕಾಣಿಸುವ ತಾಯಿ ತಂದೆಯರನ್ನು ತಮ್ಮ ಶರೀರ ತಾಯಿ ತಂದೆಯರೆಂದು ತಿಳಿದು, ಅವರಿಗೆ ತಕ್ಕ ವಿಧಾನದಲ್ಲಿ ಗೌರವಿಸಿ, ಅವರಿಗೆ ಎಂತಹ ತೊಂದರೆ ಆಗದಂತೆ, ಎಂತಹ ನೋವು ಕೊಡದಂತೆ ಜಾಗ್ರತೆಯಿಂದ ನೋಡಿಕೊಳ್ಳುವರು.

ಶರೀರ ತಾಯಿ ತಂದೆಯರನ್ನು ಸರಿಯಾಗಿ ಪೋಷಿಸದ ಮಕ್ಕಳು ಕೆಲವರು, ಯಾವ ಕಾಳಜಿ ವಹಿಸದ ಮಕ್ಕಳು ಕೆಲವರು, ಅಲ್ಲಲ್ಲಿ ಕಾಣಿಸುತ್ತಿರುತ್ತಾರೆ. ಅಂತಹ ಮಕ್ಕಳನ್ನು ನೋಡಿ ತಾಯಿ ತಂದೆಯರು ಬಾಧೆಪಡುತ್ತಾರೆ. ಪೋಷಣೆ ವಿಷಯದಲ್ಲಿ ಮಕ್ಕಳು ಯಾವ ಕಾಳಜಿ ವಹಿಸದೆ ಹೋದರೂ, ಮಕ್ಕಳನ್ನು ಕುರಿತು ಬಾಧೆ ಪಡದೆ ಅದೆಲ್ಲವು ತಮ್ಮ ಕರ್ಮವೆಂದು ಸರಿಮಾಡಿಕೊಳ್ಳುವ ತಾಯಿ ತಂದೆಯರೂ ಇರುವರು. ಮಕ್ಕಳು ಪೋಷಿಸದೆ ಹೋದರೂ, ತಮ್ಮನ್ನು ಆಸ್ತಿ ಸಂಪಾದಿಸಿಲ್ಲವೆಂದು ದೂಷಿಸಿದರೂ, ಉನ್ನತ ವಿದ್ಯೆ ಓದಿದ ಮಕ್ಕಳು ತಮ್ಮ ತಾಯಿ ತಂದೆಯರನ್ನು ತಿಳಿವಳಿಕೆಯಿಲ್ಲದವರಂತೆ ಭಾವಿಸಿದರೂ, ಮಾತು ಮಾತಿಗೂ ಹೇಳನವಾಗಿ ಮರ್ಯಾದೆ ಇಲ್ಲದೆ ಮಾತನಾಡುತ್ತಿದ್ದರೂ, ತಾಯಿ ತಂದೆಯರು ಸ್ವಲ್ಪ ಮಟ್ಟಿಗೆ ಬಾಧೆ ಪಡುತ್ತಿರುತ್ತಾರೆ. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಬಾಧೆ ಕಲ್ಪಿಸುವ ವಿಷಯವು ಒಂದಿದೆ. ತಾಯಿ ತಂದೆಯರನ್ನು ಯಾವುದೇ ಕಷ್ಟವಿಲ್ಲದೆ ಪೋಷಿಸುವ ಮಕ್ಕಳಾದರೂ, ಒಂದು ವಿಷಯದಲ್ಲಿ ಮಾತ್ರ ತಪ್ಪಾಗಿ ಮಾತಾಡಿದರೆ, ಆ ಮಾತು ಅವರ ತಾಯಿ ತಂದೆಯರನ್ನು ಎಲ್ಲಕ್ಕಿಂತಲೂ ಹೆಚ್ಚಾಗಿ ನೋಯಿಸುತ್ತದೆ. ಅಂತಹ ಯಥಾರ್ಥ ವಿಷಯವನ್ನು ಕೆಳಗೆ ವಿವರಿಸುತ್ತೇನೆ ನೋಡಿರಿ.

ಒಂದು ಮಧ್ಯೆ ತರಗತಿ ಕುಟುಂಬಕ್ಕೆ ಸೇರಿದ ದಂಪತಿಗಳಿಗೆ ಒಬ್ಬನೇ ಒಬ್ಬ ಮಗ ಇರುತ್ತಾನೆ. ತಮಗೆ ಒಬ್ಬನೇ ಮಗ ಇರುವುದರಿಂದ ಆ ಮಗನ ಮೇಲೆ ಮೋಹಗುಣವೂ, ಪ್ರೇಮ ಗುಣವೂ ಇದ್ದು ಎಷ್ಟೋ ಆಪ್ಯಾಯತೆಯಿಂದ ಬೆಳಸಿಕೊಂಡಿದ್ದರು. ತಮ್ಮ ಜೀವನವೇ ತಮ್ಮ ಮಗ ಅನ್ನುವಷ್ಟು ಗಾಢವಾಗಿ

ತಮ್ಮ ಮಗನನ್ನು ಬೆಳೆಸುತ್ತಾ, ತಮಗಿಲ್ಲದ ಸೌಕರ್ಯಗಳನ್ನು ಮಗನಿಗೆ ಒದಗಿಸುತ್ತಿದ್ದರು. ರುಚಿಕರವಾದ ಪದಾರ್ಥಗಳನ್ನು ಮಗನಿಗೆ ಮಾಡಿಟ್ಟು, ತಾವು ರುಚಿಯಿಲ್ಲದ ಆಹಾರವನ್ನು ತಿನ್ನುತ್ತಿದ್ದರು. ತಮಗೆ ಹಣದ ವ್ಯವಸ್ಥೆ ಇಲ್ಲದಿದ್ದರೂ ಸಾಲ ಮಾಡಿ ಮಗನಿಗೆ ಒಳ್ಳೆಯ ಬಟ್ಟೆಗಳನ್ನು ಕೊಡಿಸುತ್ತಿದ್ದರು. ಆ ವಿಧವಾಗಿ ಮಗನನ್ನು ಚಿಕ್ಕಂದಿನಿಂದಲೇ ಸುಖವಾಗಿ ಬೆಳೆಸುತ್ತಾ ಅವರು ಎಷ್ಟೋ ಕಷ್ಟಗಳನ್ನು ಅನುಭವಿಸುತ್ತಿದ್ದರು. ದೊಡ್ಡ ಓದು ಓದಿಸುವ ಸಾಮರ್ಥ್ಯ ಅವರಿಗಿಲ್ಲದಿದ್ದರೂ ಶ್ರಮ ಪಟ್ಟು ತಮ್ಮ ಮಗನನ್ನು ಉನ್ನತ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ತಮ್ಮ ಮಗ ದೊಡ್ಡ ಓದು ಓದುತ್ತಿದ್ದಾನೆಂದು ಸಂತೋಷಪಡುತ್ತಾ ತಮ್ಮ ಕಷ್ಟವನ್ನು ಮರೆತು ಹೋಗುತ್ತಿದ್ದರು. ಅಂತಹ ಸಮಯದಲ್ಲಿ ಮಗ ಪಟ್ಟಣದಲ್ಲಿ ವಾಸ ಮಾಡುತ್ತಾ, ನನಗೋಸ್ಕರ ತಾಯಿ ತಂದೆಯರು ಎಷ್ಟು ಕಷ್ಟ ಪಡುತ್ತಿದ್ದಾರೆಂದು ಸ್ವಲ್ಪವೂ ಗ್ರಹಿಸದೆ, ತನಗಿಷ್ಟ ಬಂದಂತೆ ನಡೆದುಕೊಳ್ಳುತ್ತಿದ್ದನು. ಆತನ ತಾಯಿ ತಂದೆಯರು ಕಷ್ಟಪಟ್ಟು ತನಗೋಸ್ಕರ ಕಳುಹಿಸುತ್ತಿದ್ದ ಹಣವನ್ನು ಖರ್ಚು ಮಾಡುತ್ತಿದ್ದನು. ಅಷ್ಟೇ ಅಲ್ಲದೆ ತನ್ನ ಹಾಗೆ ಜಾಲಿಯಾಗಿ ಹಣವನ್ನು ಖರ್ಚುಮಾಡುತ್ತಾ, ತನ್ನೊಂದಿಗೆ ಓದುತ್ತಿದ್ದ ಒಬ್ಬ ಧನಿಕ ಕುಟುಂಬಕ್ಕೆ ಸೇರಿದ ಹುಡುಗಿಯನ್ನು ಪ್ರೀತಿಸಿದ್ದಾನೆ. ಆ ಹುಡುಗಿ ಸಹ ಆತನನ್ನು ಧನಿಕ ಕುಟುಂಬಕ್ಕೆ ಸೇರಿದವನೆಂದು ನಂಬಿ ಆತನನ್ನು ಪ್ರೀತಿಸಿದ್ದಾಳೆ. ಹೀಗೆ ಒಬ್ಬರಿಗೊಬ್ಬರು ಪ್ರೀತಿಸಿಕೊಂಡ ನಂತರ ತಮ್ಮ ಓದು ಸಹ ಮುಗಿದು ಹೋಗಿದೆ. ಓದು ಮುಗಿದ ಕೂಡಲೇ ಆತನಿಗೆ ದೊಡ್ಡ ಉದ್ಯೋಗ ಬಂದಿದೆ. ಉದ್ಯೋಗ ಬಂದ ನಂತರ ಪ್ರೀತಿಸಿದ ಹುಡಿಗಿಯನ್ನು ಮದುವೆ ಮಾಡಿಕೊಳ್ಳಬೇಕೆಂದುಕೊಂಡಿದ್ದಾನೆ. ಮದುವೆ ವಿಷಯವನ್ನು ಮಾತಾಡುವುದಕ್ಕೋಸ್ಕರ ಹುಡುಗಿ ಹೇಳಿದ ಹಾಗೆ ಒಂದು ದಿನ ಅವರ ಮನೆಗೆ ಹೋಗಿದ್ದಾನೆ. ಆ ಹುಡುಗಿ ತಾನು ಪ್ರೀತಿಸಿದ ಹುಡುಗನನ್ನು ತನ್ನ ತಾಯಿ ತಂದೆಯರಿಗೆ ಪರಿಚಯ ಮಾಡಿಸಿದಳು. ಹುಡುಗಿ ಮನೆಗೆ ಹೋಗಿದ್ದ ಆತನು ಎಷ್ಟೋ ಬೆಲೆಯುಳ್ಳ ಆ ಮನೆಯನ್ನು, ಉನ್ನತವಾದ ಪದವಿಯಲ್ಲಿದ್ದ ಹುಡುಗಿ ತಾಯಿ ತಂದೆಯರನ್ನು ನೋಡಿ, ತನ್ನ ಪೂರಿಗುಡಿಸ ಲನ್ನು ನೋಡಿದರೂ, ತನ್ನ ತಾಯಿ ತಂದೆಯರನ್ನು ನೋಡಿದರೂ ತಾನು

ಪ್ರೀತಿಸಿದ ಹುಡುಗಿ ತನ್ನನ್ನು ಮದುವೆ ಮಾಡುಕೊಳ್ಳುವುದಿಲ್ಲವೆಂದು, ಹಾಗೆ ಹುಡುಗಿ ತಾಯಿ ತಂದೆಯರು ನಮ್ಮ ಮದುವೆಗೆ ಒಪ್ಪಿಕೊಳ್ಳುವುದಿಲ್ಲವೆಂದುಕೊಂಡ ಆತನು, ಅವರು ತನ್ನ ಮನೆಗೆ ಹೋಗದಂತೆ ಪ್ರಸ್ತುತಕ್ಕೆ ತನ್ನ ತಾಯಿ ತಂದೆಯರು ವಿದೇಶಕ್ಕೆ ಹೋಗಿದ್ದಾರೆಂದು, ತಿರುಗಿ ಬಂದ ಮೇಲೆ ಅವರನ್ನು ಪರಿಚಯ ಮಾಡಿಸುತ್ತೇನೆಂದು ಹೇಳಿದ್ದಾನೆ. ಆಗ ಹುಡುಗಿ ತಾಯಿ ತಂದೆಯರು ನಮಗೆ ಒಬ್ಬಳೆ ಮಗಳೆಂದು ಇನ್ನೊಂದು ಸಂತಾನವಿಲ್ಲವೆಂದು, ಆದ್ದರಿಂದ ಇದ್ದ ಆಸ್ತಿ ಎಲ್ಲಾ ಅವಳದ್ದೇ ಎಂದು, ಆಕೆಯನ್ನು ಮಾಡಿಕೊಂಡರೆ ತಮ್ಮ ಕುಟುಂಬದಲ್ಲಿ ಮನೆ ಅಳಿಯನಾಗಿರಬೇಕೆಂದು ಹೇಳಿದ್ದಾರೆ. ಆಗ ಆತನು ತನಗೆ ಯಾವುದೇ ಆಸ್ತಿ ಇಲ್ಲವಾದ್ದರಿಂದ ಇದಕ್ಕಿಂತ ಹೆಚ್ಚಿನ ಭಾಗ್ಯ ಇಲ್ಲವೆಂದು, ಇಂತಹ ಅವಕಾಶ ಬಿಟ್ಟರೆ ಮತ್ತೆ ಸಿಗುವುದಿಲ್ಲವೆಂದುಕೊಂಡು, ಹಾಗೇ ಅವರ ಮನೆಯಲ್ಲಿಯೇ ಇರುತ್ತೇನೆಂದು ಒಪ್ಪಿಕೊಳ್ಳುತ್ತಾನೆ.

ಹಾಗೆ ಒಪ್ಪಿಕೊಂಡಿದ್ದರಿಂದ ಅವರ ಮದುವೆ ನಿಶ್ಚಯವಾಯಿತು. ತನ್ನ ಮದುವೆ ನಿಶ್ಚಯವಾಗಿದೆಯೆಂದು ಆತನು ತನ್ನ ತಾಯಿ ತಂದೆಯರಿಗೆ ಹೇಳಲಿಲ್ಲ. ಹಾಗೆ ಹೇಳಿದರೆ ಅವರು ತನ್ನ ಮದುವೆಗೆ ಬರುತ್ತಾರೆಂದು, ಅವರ ಬಾಡಿ ಹೋದ ಮುಖಗಳನ್ನು, ತೆಳುವಾದ ದೇಹಗಳನ್ನು ತನ್ನ ಮಾವನವರು ನೋಡಿದರೆ ತಾವು ಬಡವರೆಂದು ತಿಳಿದುಹೋಗುತ್ತದೆಂದು, ಇಲ್ಲಿಯವರೆಗು ತಾನು ಧನಿಕನೆಂದು ಬೊಂಕಿದ ಮಾತೆಲ್ಲಾ ಅಸತ್ಯವೆಂದು ತಿಳಿದು ಹೋಗುತ್ತದೆಂದು, ಇದರಿಂದ ಮದುವೆ ನಿಂತು ಹೋಗುತ್ತದೆಂದು ತಿಳಿದು, ತನ್ನ ತಾಯಿ ತಂದೆಯರಿಗೆ ಮದುವೆ ವಿಷಯ ಹೇಳಲಿಲ್ಲ. ಅಷ್ಟೇ ಅಲ್ಲದೆ ಮದುವೆ ದಿನ ತನ್ನ ತಾಯಿ ತಂದೆಯರೆಂದು ತನ್ನ ಮಾವನವರಿಗೆ ಪರಿಚಯ ಮಾಡಿಸುವುದಕ್ಕೆ, ಚೆನ್ನಾಗಿ ಕಾಣಿಸುವ ವಯಸ್ಸಿರುವ ಒಂದು ಜೋಡಿಯನ್ನು ಏರ್ಪಾಟು ಮಾಡಿಕೊಳ್ಳುತ್ತಾನೆ. ತನ್ನ ತಾಯಿ ತಂದೆಯರಾಗಿ ನಟಿಸುವಂತೆ ಮುಂಚೆಯೇ ಅವರಿಗೆ ಹೇಳಿ ಏರ್ಪಾಟು ಮಾಡಿಕೊಂಡಿದ್ದಾನೆ. ಮದುವೆಗಿಂತ ಮೊದಲ ದಿನ ತನ್ನ ಮಾವನವರಿಗೆ ಇವರೇ ನನ್ನ ತಾಯಿ ತಂದೆಯರೆಂದು ತಾನು ಏರ್ಪಾಟು

ಮಾಡಿಕೊಂಡವರನ್ನು ತೋರಿಸುತ್ತಾನೆ. ಕೊನೆಗೆ ಮದುವೆ ನಡೆಯುವ ಸಮಯ ಬಂದಿದೆ. ವಾಸ್ತವವಾಗಿ ತನ್ನ ತಾಯಿ ತಂದೆಯರಿಗೆ ತಮ್ಮ ಮಗನ ಮದುವೆಯ ವಿಷಯ ತಿಳಿಯದು. ಆದರೆ ತಮ್ಮ ಮಗನನ್ನು ನೋಡಿ ಬರಬೇಕೆಂದು ಆತನ ತಾಯಿ ತಂದೆಯರು ಅಂದುಕೊಂಡು ಪಟ್ಟಣಕ್ಕೆ ಬರುತ್ತಾರೆ. ಸರಿಯಾಗಿ ಆ ದಿನ ಅವರ ಮಗನ ಮದುವೆ ನಡೆಯುವ ದಿನವೆಂದು ಅವರಿಗೆ ತಿಳಿಯದು. ಪಟ್ಟಣಕ್ಕೆ ಬಂದ ನಂತರ ತಮ್ಮ ಮಗನ ಮದುವೆ ಎಂದು, ಆ ಮದುವೆ ಮುಹೂರ್ತ ಒಂದು ಗಂಟೆ ಅವಧಿಯಲ್ಲಿದೆಯೆಂದು, ವಿವಾಹ ಇಂತಹ ಕಲ್ಯಾಣ ಮಂಟಪದಲ್ಲಿ ನಡೆಯುತ್ತಿದೆಯೆಂದು ತಿಳಿಯುತ್ತದೆ. ಆ ವಿಷಯ ತಿಳಿದ ತಕ್ಷಣವೇ ಅವರು ಗಾಬರಿಯಿಂದ ಕಲ್ಯಾಣ ಮಂಟಪಕ್ಕೆ ಬರುತ್ತಾರೆ. ಅವರು ಬರುವ ಸಮಯಕ್ಕೆ ಮದುವೆ ಪೀಠದ ಮೇಲೆ ತಮ್ಮ ಮಗ ಇರುವುದು ನೋಡಿ ಆಗ ಏನು ಮಾತನಾಡದೆ, ಅಲ್ಲಿರುವ ಜನರಲ್ಲಿ ನಿಂತುಕೊಂಡು ಮಗನ ಮದುವೆಯನ್ನು ನೋಡುತ್ತಾ ನಿಂತು ಹೋಗಿದ್ದಾರೆ. ಅವರು ಅಲ್ಲಿಗೆ ಬಂದ ನಂತರ ಹತ್ತು ನಿಮಿಷದಲ್ಲಿ ಮದುವೆ ಮುಗಿದು ಹೋಗುತ್ತದೆ. ಮದುವೆ ಮುಗಿದ ನಂತರ ಮದುಮಗ ಮದುಮಗಳು ಅವರವರ ತಾಯಿ ತಂದೆಯರಿಗೆ ಪಾದ ನಮಸ್ಕಾರ ಮಾಡಬೇಕೆಂದು ಪುರೋಹಿತನು ಹೇಳಿದಾಗ, ಮದುಮಗ ಮುಂಚೆಯೇ ಏರ್ಪಾಟು ಮಾಡಿಕೊಂಡಿದ್ದ ತಾಯಿ ತಂದೆಯರಿಗೆ ಮುಗಿದು ನಂತರ ಮದು ಮಗಳ ತಾಯಿ ತಂದೆಯರಿಗೆ ಮುಗಿಯುತ್ತಾರೆ. ಈ ಸಂಘಟನೆಯನ್ನು ಪ್ರತ್ಯಕ್ಷವಾಗಿ ನೋಡಿದ ಮದುಮಗನ ಅಸಲು ತಾಯಿ ತಂದೆಯರಿಗೆ, ಅಲ್ಲಿನ ವಿಷಯವೆಲ್ಲಾ ಅರ್ಥವಾಗುತ್ತದೆ. ತಮ್ಮ ಪ್ರಾಣಕ್ಕಿಂತ ಹೆಚ್ಚಾಗಿ ಬೆಳೆಸಿದ ತಮ್ಮ ಮಗನೆ ನಮ್ಮನ್ನು ಘೋರವಾದ ಮೋಸ ಮಾಡಿದ್ದಾನೆಂದು ಗ್ರಹಿಸಿದರು.

ತಮ್ಮನ್ನು ಏಕೆ ಇಷ್ಟು ಮೋಸ ಮಾಡಿದ್ದಾನೋ ತಮ್ಮ ಮಗನನ್ನು ಕೇಳಿ ತಿಳಿದುಕೊಳ್ಳಬೇಕೆಂದು, ಜನರಲ್ಲಿ ಮುಂದೆ ಹೋಗಿ ತಮ್ಮ ಮಗನನ್ನು ಸೇರಿದ್ದಾರೆ. ಆಗ ಅವರ ಮಗ ಏನು ತೊಣಕದೆ ಸರ್ವಸಾಧಾರಣವಾಗಿ, ಚೆನ್ನಾಗಿದ್ದೀರಾ ಎಂದು ಹೊರಗಿನವರನ್ನು ಮಾತನಾಡಿಸುವ ಹಾಗೆ ಮಾತ

ನಾಡಿಸುತ್ತಾನೆ. ತಕ್ಷಣವೆ ಅಲ್ಲಿಯೇ ಇದ್ದ ತನ್ನ ಮಾವನವರಿಗೆ, ಅತ್ತೆಯವರಿಗೆ ತನ್ನ ತಾಯಿ ತಂದೆಯರನ್ನು ತೋರಿಸಿ ಇವರು ನಮ್ಮ ಹೊಲವನ್ನು ಗುತ್ತಿಗೆ ಮಾಡುವ ಗುತ್ತಿಗೆ ದಾರರೆಂದು ಪರಿಚಯ ಮಾಡಿಸುತ್ತಾನೆ. ಆಗ ಆತನ ತಾಯಿ ತಂದೆಯರು ಆ ಮಾತು ಕೇಳಿ ಆಶ್ಚರ್ಯವಾಗಿ, ತಮ್ಮ ಮಗ ನಮ್ಮನ್ನು ಕುರಿತು ಅವರ ಬಳಿ ಸುಳ್ಳು ಹೇಳುತ್ತಿದ್ದಾನೆಂದು ಅರ್ಥ ಮಾಡಿಕೊಂಡಿದ್ದಾರೆ. ತಮ್ಮನ್ನು ಕುರಿತು ಸುಳ್ಳು ಹೇಳುವುದೇ ಅಲ್ಲದೆ, ತಮ್ಮ ಸ್ಥಾನದಲ್ಲಿ ಬೇರೆ ತಾಯಿ ತಂದೆಯರನ್ನು ಏರ್ಪಾಟು ಮಾಡಿಕೊಂಡಿದ್ದಾನೆಂದು ಸಹ ತಿಳಿದು, ಆ ಸಮಯದಲ್ಲಿ ಅಲ್ಲಿ ಏನು ಮಾತಾಡಿದರೂ ತಮ್ಮ ಮಗ ಮೋಸಗಾರನೆಂದು ಎಲ್ಲರಿಗೂ ತಿಳಿದು ಹೋಗುತ್ತದೆಂದು ತಿಳಿದು ನಾವೇ ತಾಯಿ ತಂದೆಯರೆಂದು ಈಗ ಹೇಳಿದರೆ, ಕೊನೆಗೆ ತಮ್ಮ ಮಗನೇ ಬಾಧೆ ಪಡಬೇಕಾಗುತ್ತದೆಂದು, ತಮ್ಮಿಂದ ತಮ್ಮ ಮಗ ಬಾಧೆ ಬೀಳುವುದು ಇಷ್ಟವಿಲ್ಲದೆ, ಅವರು ಏನು ಮಾತನಾಡದೆ ಸುಮ್ಮನಿರುತ್ತಾರೆ. ಆತನು ತನ್ನ ಸುಖಕ್ಕಾಗಿ, ತನಗೆ ಇಷ್ಟವಾದ ಹುಡುಗಿಯನ್ನು ಮದುವೆ ಮಾಡಿಕೊಳ್ಳುವುದಕ್ಕಾಗಿ ತನ್ನ ತಾಯಿ ತಂದೆಯರನ್ನು ಬಿಟ್ಟು ಬೇರೆಯವರನ್ನು ತನ್ನ ತಾಯಿ ತಂದೆಯರಾಗಿ ತೋರಿಸುತ್ತಾನೆ. ತಮ್ಮ ಮಗ ನಿಜವಾದ ತಾಯಿ ತಂದೆಯರನ್ನು ಬಿಟ್ಟು, ತನ್ನ ಗೌರವಕ್ಕಾಗಿ ಬಾಡಿಗೆಗೆ ಸ್ವಲ್ಪ ಕಾಲವಿದ್ದು ಹೋಗುವವರನ್ನೆ ತಾಯಿ ತಂದೆಯರೆಂದು ತೋರಿಸುವುದೇ ಅಲ್ಲದೆ, ಮದುವೆ ಸಮಯದಲ್ಲಿ ಶಾಶ್ವತವಲ್ಲದ ತಾಯಿ ತಂದೆಯರ ಹೆಸರನ್ನೇ ತನ್ನ ತಾಯಿ ತಂದೆಯರೆಂದು ಹೇಳುವುದನ್ನು ಗಮನಿಸಿದ ತಾಯಿ ತಂದೆಯರು, ತಮಗೆ ಹುಟ್ಟಿ ತಮ್ಮ ಹೆಸರು ಹೇಳದೆ ಬೇರೆಯವರ ಹೆಸರು ಹೇಳುವುದು ಎಷ್ಟೋ ವಿಷಾದಕರವಾದ ವಿಷಯುವಾದರೂ, ತಮ್ಮ ಮಗ ಎಷ್ಟು ಮೋಸಗಾರನಾದರೂ ನಮ್ಮ ಮಗನೇ ಎಂದು ಸಹಿಸಿಕೊಂಡರು.

ನೋಡಿದಿರಾ ಇದು ಎಷ್ಟು ಬಾಧೆ ಪಡುವ ವಿಷಯವೊ! ಯಾವ ತಾಯಿ ತಂದೆಯಾದರೂ ತಮ್ಮ ಎದುರಿಗೆ ತಮ್ಮ ಮಗ ತಮ್ಮನ್ನು ಅಲ್ಲ ಎಂದು, ಇತರರನ್ನು ತಾಯಿ ತಂದೆಯರೆಂದು ಹೇಳುವುದು ನೋಡಿದರೆ,

ಅವರು ಎಷ್ಟೋ ಕುಗ್ಗಿ ಹೋಗುತ್ತಾರೆ. ಈ ವಿಷಯ ಯಾವ ತಾಯಿ ತಂದೆಯರಿಗಾದರೂ ಮಾನಸಿಕ ಭಾಧೆಯನ್ನು ಕಲ್ಪಿಸುತ್ತದೆ. ಆದರೆ ಇಲ್ಲಿ ನಡೆದ ಸಂಘಟನೆಯಲ್ಲಿ ಮದುಮಗನ ನಿಜವಾದ ತಾಯಿ ತಂದೆಯರು ಬಾಧೆ ಬೀಳಲಿಲ್ಲ, ಎಲ್ಲಿದ್ದರೂ ಯಾರನ್ನು ತಾಯಿ ತಂದೆಯರೆಂದು ಹೇಳಿದರೂ, ಕೊನೆಗೆ ಆತನು ನಮ್ಮ ಮಗನೇ ಅಲ್ಲವೆ! ಎಂದು, ನಮ್ಮ ಮಗ ಸುಖವಾಗಿದ್ದರೆ ಸಾಕೆಂದು ಅಂದುಕೊಳ್ಳುತ್ತಾರೆ. ನಮ್ಮ ಮಗ ನಮ್ಮ ಕಣ್ಣೆದುರೆ ನಮ್ಮನ್ನು ಗುತ್ತಿಗೆದಾರರನ್ನಾಗಿ ಚಿತ್ರಿಸಿ, ತಾಯಿ ತಂದೆಯರಲ್ಲದ, ತಾತ್ಕಾಲಿಕ ತಾಯಿ ತಂದೆಯರನ್ನೇ ತನ್ನ ತಾಯಿ ತಂದೆಯರೆಂದು ಹೇಳಿಕೊಳ್ಳುವುದನ್ನು ಸಹಿಸಿಕೊಂಡು, ಅವನು ಹೇಗೆ ಹೇಳಿದರೂ ನಾವೇ ಅಲ್ಲವೆ! ಆತನ ತಾಯಿ ತಂದೆಯರು ಅಂದುಕೊಂಡರು. ಪ್ರಸ್ತುತಕ್ಕೆ ತನ್ನದು ತಪ್ಪೆಂದು ತಿಳಿಯದೆ ಇತರರನ್ನು ತಾಯಿ ತಂದೆಯರೆಂದು ಹೇಳಿದರೂ, ಎಂದಿಗಾದರೂ ನಮ್ಮನ್ನೇ ತಾಯಿ ತಂದೆಯರಾಗಿ ಒಪ್ಪಿ ಕೊಳ್ಳುತ್ತಾನೆಂದು ಅಂದುಕೊಂಡರು. ಹೀಗೆ ಆರು ತಿಂಗಳ ಕಾಲ ಕಳೆದು ಹೋಗಿದೆ. ಅಷ್ಟರಲ್ಲಿ ಒಂದು ದಿನ ತಮ್ಮ ಮಗನಿಗೆ ದೊಡ್ಡ ರೋಗ ಬಂದಿದೆ ಎಂದು ಹಳ್ಳಿಯಲ್ಲಿದ್ದ ತಾಯಿ ತಂದೆಯರಿಗೆ ತಿಳಿಯಿತು. ತಮ್ಮ ಮಗ ರೋಗದಿಂದ ಬಾಧೆ ಪಡುತ್ತಿದ್ದಾನೆಂದು ತಿಳಿದ ತಕ್ಷಣವೆ, ಆ ವೃದ್ಧ ದಂಪತಿಗಳು ಪಟ್ಟಣಕ್ಕೆ ಬರುತ್ತಾರೆ. ಅವರು ಬರುವ ಮುಂಚೆ ಆಸ್ಪತ್ರೆಯಲ್ಲಿದ್ದ ಆತನಿಗೆ ರಕ್ತ ಕಡಿಮೆ ಇದೆಯೆಂದು, ಆತನಿಗೆ ಸರಿಹೊಂದುವ ಗ್ರೂಪ್ ರಕ್ತ ಬೇಕೆಂದು ಡಾಕ್ಟರ್‌ಗಳು ಹೇಳಿದ್ದಾರೆ. ಆಗ ಮದುವೆಯಲ್ಲಿ ಪ್ರಸ್ತುತಕ್ಕೆ ತಾಯಿ ತಂದೆಯರಾಗಿದ್ದವರನ್ನು ಆತನ ಮಾವನವರು ಕರೆಸುತ್ತಾನೆ. ಅವರ ರಕ್ತವನ್ನು ಪರೀಕ್ಷಿಸಿದಾಗ ಅವರಲ್ಲಿ ಆತನ ಗ್ರೂಪ್‌ಗೆ ಸಂಬಂಧಿಸಿದ ರಕ್ತ ಇಲ್ಲವೆಂದು ತಿಳಿಯುತ್ತದೆ. ಹಾಗೆ ನಡೆದ ನಂತರ ಆತನ ನಿಜವಾದ ತಾಯಿ ತಂದೆಯರು ಆಸ್ಪತ್ರೆಗೆ ಬರುವುದು ನಡೆಯುತ್ತದೆ. ತನ್ನ ಅಳಿಯ ಗುತ್ತಿಗೆದಾರರೆಂದು ಹೇಳಿದವರನ್ನು ನೋಡಿ ಆತನ ಮಾವನಿಗೆ ಅನುಮಾನ ಬರುತ್ತದೆ. ಮುಂಚೆ ತಾಯಿ ತಂದೆಯರಾಗಿ ಬಂದವರಲ್ಲಿ ಆತನ ಹೋಲಿಕೆಗಳು ಇಲ್ಲವಾದ್ದರಿಂದ, ಅವರ ರಕ್ತದ ಗ್ರೂಪ್ ಬೇರೆಯಿರುವುದರಿಂದ, ಅವರು ನಿಜವಾದ ತಾಯಿ ತಂದೆಯರಲ್ಲವೇನೋ ಎಂಬ ಸಂಶಯ ಬಂದಿದೆ.

ಹಾಗೆ ಗುತ್ತಿಗೆದಾರರೆಂದು ಹೇಳಿರುವ ದಂಪತಿಗಳಲ್ಲಿ ಅಳಿಯನ ಹೋಲಿಕೆಗಳು ಹೆಚ್ಚಾಗಿ ಇರುವುದನ್ನು ನೋಡಿ ಇವರೆ ಆತನ ತಾಯಿ ತಂದೆಯರೇನೋ ಎಂಬ ಅನುಮಾನ ಬಂದಿದೆ. ತಕ್ಷಣವೆ ಆತನ ಮಾವನವರು ಅಲ್ಲಿಗೆ ಬಂದ ದಂಪತಿಗಳ ರಕ್ತವನ್ನು, ಡಿ.ಎನ್.ಎ (ಜೀನ್ಸ್) ಪರೀಕ್ಷಿಸಿದರೆ ಆತನ ರಕ್ತದ ಗ್ರೂಪ್ ಸರಿಹೋಗುವುದಲ್ಲದೆ, ಆ ದಂಪತಿಗಳ ಡಿ.ಎನ್.ಎ (ಜೀನ್ಸ್) ತನ್ನ ಅಳಿಯನ ಡಿ.ಎನ್.ಎ ಒಂದೇ ಎಂದು ತಿಳಿದು ಹೋಗಿದೆ. ಆದ್ದರಿಂದ ಆ ದಂಪತಿಗಳಿಗೆ ಆತನು ಮಗನೆಂದು, ಅವರೇ ಆತನ ನಿಜವಾದ ತಾಯಿ ತಂದೆಯರೆಂದು ತಿಳಿದು ಹೋಗಿದೆ. ಕೊನೆಗೆ ತಾವೇ ನಿಜವಾದ ತಾಯಿ ತಂದೆಯರೆಂದು, ಮದುವೆಯಲ್ಲಿ ಕಾಣಿಸಿದವರು ತಾತ್ಕಾಲಿಕ ತಾಯಿ ತಂದೆಯರಾಗಿ ಇರುವವರೆಯೆಂದು ಎಲ್ಲರಿಗೂ ತಿಳಿದುಹೋಗಿರುವುದರಿಂದ ತಮ್ಮ ಮಗನೂ ಸಹ ತಮ್ಮನ್ನು ನಿಜವಾದ ತಾಯಿ ತಂದೆಯರನ್ನಾಗಿ ಒಪ್ಪಿಕೊಂಡಿದ್ದರಿಂದ ಆ ದಂಪತಿಗಳು ಸಂತೋಷಿಸಿದರು. ಆಗ ತಮ್ಮ ಮಗನನ್ನು ಸ್ವಂತ ಮನೆಗೆ ಕರೆದುಕೊಂಡು ಹೋದರು.

ತನ್ನ ನಿಜವಾದ ತಾಯಿ ತಂದೆಯರನ್ನು ಬಿಟ್ಟು ಇಷ್ಟುಕಾಲ ಬೇರೆಯಾಗಿ, ದೂರವಾಗಿ ಇದ್ದಿದ್ದರಿಂದ ಮಗ ತಾಯಿ ತಂದೆಯರಿಗೆ ಕ್ಷಮಾಪಣೆ ಹೇಳಿಕೊಂಡನು. ತನ್ನ ತಪ್ಪನ್ನು ತಿಳಿದುಕೊಂಡಿದ್ದಕ್ಕೆ ಮತ್ತೆ ನಿಜವಾದ ತಂದೆ ಮನೆಗೆ ಸೇರಿಕೊಂಡಿದ್ದಾನೆ. ಈ ಒಟ್ಟು ಸಂಘಟನೆಯಲ್ಲಿ ಯಾರಾದರೂ ಮಗನದ್ದೇ ತಪ್ಪೆಂದು ತಾಯಿ ತಂದೆಯರು ಎಷ್ಟೋ ಸಮಾಧಾನದಿಂದ ವ್ಯವಹರಿಸಿದ್ದಾರೆಂದೂ, ಅಂತಹ ಮಗ ಯಾವ ತಾಯಿ ತಂದೆಯರಿಗೆ ಇರಬಾರದೆಂದು ಹೇಳುತ್ತಾರೆ. ಈ ಸಂಗತಿಯನ್ನು ಓದಿದ ನೀವೂ ಸಹ ಮಗನದ್ದು ವಿಲನ್ ಪಾತ್ರ, ತಂದೆಯದು ಹೀರೋ ಪಾತ್ರ ಎಂದು ತಪ್ಪದೆ ಹೇಳುವಿರಿ. ಆದರೆ ಆ ವಿಲನ್ ಪಾತ್ರ ತನ್ನದೆ ಎಂದು ಯಾರೂ ಅಂದುಕೊಳ್ಳುವುದಿಲ್ಲ. ಈ ವಿಷಯವನ್ನು ವಿವರವಾಗಿ ಹೇಳಿಕೊಂಡರೆ ಹೀಗಿದೆ. ಪ್ರತಿ ಮನುಷ್ಯನಿಗೆ ಶಾಶ್ವತವಾದ, ಅಶಾಶ್ವತವಾದ ಎರಡು ವಿಧವಾದ ತಾಯಿ ತಂದೆಯರು ಇರುವರು. ಈಗ

ಹೇಳಿದ ಉದಾಹರಣೆಯಲ್ಲಿ ಮದುಮಗನಿಗೆ ಮದುವೆ ಸಮಯದಲ್ಲಿ ಸ್ವಲ್ಪ ಹೊತ್ತು ತಾಯಿ ತಂದೆಯರಾಗಿದ್ದವರು ಅಶಾಶ್ವತ ತಾಯಿ ತಂದೆಯರು. ಆತನನ್ನು ಚಿಕ್ಕಂದಿನಿಂದ ಬೆಳಿಸಿದ ಶಾಶ್ವತ ತಾಯಿ ತಂದೆಯರು ಇದ್ದಹಾಗೆ, ಪ್ರತಿ ಮನುಷ್ಯನಿಗೂ ಪ್ರಪಂಚ ಹುಟ್ಟಿದಾಗಿನಿಂದ ಜೀವಾತ್ಮನನ್ನು ಪೋಷಿಸುತ್ತಿದ್ದ ಪ್ರಕೃತಿ ಪರಮಾತ್ಮ ಶಾಶ್ವತ ತಾಯಿ ತಂದೆಯರಾಗಿ, ಒಂದು ಜನ್ಮಕ್ಕೆ ಮಾತ್ರ ತಾಯಿ ತಂದೆಯರಾಗಿದ್ದ ಶರೀರ ತಾಯಿ ತಂದೆಯರು ಅಶಾಶ್ವತ ತಾಯಿ ತಂದೆಯರಾಗಿ ಇರುವರು. ಜೀವಾತ್ಮನು ತನ್ನ ಶಾಶ್ವತವಾದ ತಾಯಿ ತಂದೆಯರನ್ನು ಮದುಮಗನ ಹಾಗೆ ಬಿಟ್ಟುಹಾಕಿ, ಮದುವೆಯಲ್ಲಿ ಮಾತ್ರ ಕೆಲಸಕ್ಕೆ ಬರುವವರನ್ನು ಹೇಳಿಕೊಂಡಹಾಗೆ, ಒಂದು ಜನ್ಮದಲ್ಲಿ ಮಾತ್ರ ಕೆಲಸಕ್ಕೆ ಬರುವ ಅಶಾಶ್ವತವಾದವರನ್ನು ಹೇಳಿಕೊಳ್ಳುತ್ತಿದ್ದಾನೆ. ಆತನು ಮಾಡಿದ ಹಾಗೆ ನಾವೂ ಸಹ ಶಾಶ್ವತ ಜನನಿ ಜನಕರಾದ ಪ್ರಕೃತಿ ಪರಮಾತ್ಮರನ್ನು ಬಿಟ್ಟು, ತಾಯಿ ತಂದೆ ಅಲ್ಲದವರನ್ನು ಹಿಡಿದುಕೊಂಡಿದ್ದೇವೆ. ನಾವು ಪ್ರಕೃತಿ ಪರಮಾತ್ಮರನ್ನು ತಾಯಿ ತಂದೆಯರೆಂದು ಅಂದುಕೊಳ್ಳದಿದ್ದರೂ, ಅವರು ಮಾತ್ರ ಎಷ್ಟೋ ತಾಳ್ಮೆಯಿಂದಿದ್ದು ನಾವು ಎಲ್ಲಿದ್ದರೂ ಯಾರನ್ನು ಆಶ್ರಯಿಸಿದರೂ, ಕೊನೆಗೆ ಅವರು ಮನುಷ್ಯನನ್ನು ತಮ್ಮ ಸಂತತಿಯೆ ಅಲ್ಲವೆ! ಎಂದು ಅಂದುಕೊಳ್ಳುತ್ತಿದ್ದಾರೆ. ಮದುವೆಯಲ್ಲಿ ತಮ್ಮ ಮಗ ತಮ್ಮ ಮುಂದೆಯೇ ಬೇರೆ ತಾಯಿ ತಂದೆಯರಿಗೆ ಪಾದ ನಮಸ್ಕಾರ ಮಾಡುವಾಗಲು ಸಹ, ತಮ್ಮ ಮಗನ ಕ್ಷೇಮವನ್ನೇ ಕೋರಿಕೊಂಡ ತಾಯಿ ತಂದೆಯರ ಹಾಗೆ, ಪ್ರಕೃತಿ ಪರಮಾತ್ಮರು ಜೀವಾತ್ಮನ ಮೇಲೆ ಯಾವುದೇ ಕಾರಣಕ್ಕೂ ಆಗ್ರಹವನ್ನು (ಕೋಪವನ್ನು) ತೋರಿಸಲಿಲ್ಲ. ಅವರ ಮಗ ತನ್ನ ತಪ್ಪನ್ನು ತಿಳಿದುಕೊಂಡು ಕೊನೆಗೆ ತನ್ನ ಸ್ವಂತ ಮನೆಗೆ ಹೋದಹಾಗೆ, ಜೀವಾತ್ಮನು ಸಹ ತಾನು ಅಜ್ಞಾನದಿಂದ ನಡೆದುಕೊಂಡಿದ್ದು ತಪ್ಪೆಂದು ತಿಳಿದುಕೊಂಡು, ಜ್ಞಾನವನ್ನು ಅರಿತು ತನ್ನ ನಿಜವಾದ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರ ಸನ್ನಿಧಿಯನ್ನು (ಮೋಕ್ಷವನ್ನು) ಸೇರುವನು. ಈ ವಿಷಯವು ಜೀವಿಗಳಾದ ನಮ್ಮೆಲ್ಲರಿಗೂ ಕಣ್ತೆರೆಸುವಂತೆ ಇರಬೇಕೆಂದುಕೊಳ್ಳುತ್ತೇನೆ.

ಪ್ರತಿ ಮನುಷ್ಯ ತಾಯಿ ತಂದೆಯರ ವಿಷಯದಲ್ಲಿ ಗೊಂದಲ ಬೀಳಬಾರದೆಂದು, ಶರೀರ ತಾಯಿ ತಂದೆಯರನ್ನು ಶರೀರ ಗೌರವದಿಂದಲೇ, ಆತ್ಮ ತಾಯಿ ತಂದೆಯರನ್ನು ಅತ್ಮ ಗೌರವದಿಂದಲೇ ನೋಡಬೇಕೆಂದು ನಾವು ಬಹಳಬಾರಿ ಬಹಳ ಜನರಿಗೆ ತಿಳಿಸಿದ್ದೇವೆ. ಬಹಳ ಜನ ಶರೀರ ತಾಯಿ ತಂದೆಯರನ್ನು ಬಿಟ್ಟು ತನ್ನ (ಜೀವಾತ್ಮ) ತಾಯಿ ತಂದೆಯರನ್ನು ಯಾವ ಮಾತ್ರಕ್ಕೂ ಗುರುತಿಸುವುದಿಲ್ಲವೆಂದು, ಹಾಗೆ ಮಾಡುವುದರಿಂದ ತನಗೆ ಪ್ರಕೃತಿ ಪರಮಾತ್ಮರಿಂದ ಸಂಗ್ರಹಿಸುವುದು ಏನು ಲಭಿಸದೆ ಹೋಗುವುದೆಂದು ತಿಳಿಸಿದ್ದೇವೆ. ನಾವು ಹೇಳಿದ ಮಾತು ಕೇಳಿದ ಕೆಲವರು ಹೀಗೆ ಪ್ರಶ್ನಿಸಿರುವುದು ಸಹ ನಡೆದಿದೆ "ಯಾರೂ ಇಲ್ಲಿಯವರೆಗು ಹೇಳದ ವಿಷಯವನ್ನು ನೀವು ಹೇಳುತ್ತಿದ್ದೀರ. ನಮಗೆ ತಿಳಿದ ಮಟ್ಟಿಗೆ ಕಾಣಿಸುವ ತಾಯಿ ತಂದೆಯರು ಹೊರತು ಯಾರು ಇಲ್ಲ. ಇದು ನಮಗೆ ತಿಳಿದಿದ್ದೆ ಅಲ್ಲದೆ, ಎಷ್ಟೋ ಜನ ಸ್ವಾಮಿಗಳು ಮತ್ತು ಜ್ಞಾನವನ್ನು ತಿಳಿದ ಹಿರಿಯರು ಕಾಣಿಸುವ ತಾಯಿ ತಂದೆಯರನ್ನೆ ಪೋಷಿಸು ಎಂದಿದ್ದಾರೆ, ಗೌರವಿಸಬೇಕೆಂದಿದ್ದಾರೆ ಮತ್ತೆ ಪೂಜಿಸು ಎಂದಿದ್ದಾರೆ. ಹಿರಿಯರು ಹೇಳಿದ ಹಾಗೆ ಕೆಲವರು ಮಾಡುತ್ತಿದ್ದಾರೆ, ಕೆಲವರು ಮಾಡುವುದಿಲ್ಲ. ಆದರೆ ನೀವು ಮಾತ್ರ ಈಗ ಇನ್ನೊಂದು ತಾಯಿ ತಂದೆಯರು ಸಹ ಇದ್ದಾರೆಂದು, ಅವರು ಇವರಿಗಿಂತ ದೊಡ್ಡವರೆಂದು, ಅವರನ್ನು ನೀವು ಗುರ್ತಿಸದಿದ್ದರೆ ಅವರ ಆಸ್ತಿ ನಿಮಗೆ ಬರುವುದಿಲ್ಲವೆಂದು ಹೇಳುತ್ತಿದ್ದೀರ. ಅವರು ಯಾರೊ, ಅವರ ಆಸ್ತಿ ಏನೋ ನಮಗೆ ತಿಳಿಯದು. ಎಲ್ಲರಿಗೂ ತಿಳಿದ ಹಾಗೆ ನಮ್ಮ ತಾಯಿ ತಂದೆಯರೆ ನಮಗೆ ತಿಳಿದಿದ್ದಾರೆ. ಅವರು ನಮಗೆ ಹಂಚಿಕೊಟ್ಟ ಹತ್ತು ಎಕರೆ ಆಸ್ತಿ ಸಹ ತಿಳಿದಿದೆ. ಆದರೆ ಕಾಣಿಸದ ತಾಯಿತಂದೆಯರನ್ನು ಕುರಿತಾಗಲಿ, ಅವರಿಂದ ಬರುವ ಆಸ್ತಿ ವಿಷಯವಾಗಲಿ ನಮಗೆ ತಿಳಿಯದು. ನಿಮಗೇನಾದರು ತಿಳಿದಿದ್ದರೆ ಅವರು ಹೇಗಿರುತ್ತಾರೊ, ಅವರ ಆಸ್ತಿ ಏನೋ ತಿಳಿಸಿದರೆ, ಅವರನ್ನು ಹುಡುಕಿ ತಿಳಿದುಕೊಳ್ಳುವುದೆ ಅಲ್ಲದೆ, ಅವರಿಂದ ಬರುವ ಆಸ್ತಿ ಸಹ ತೆಗೆದುಕೊಳ್ಳುತ್ತೇವೆ" ಎಂದು ಕೇಳಿದರು. ಅದಕ್ಕೆ ನಾವು ಹೇಳಿದ ಉತ್ತರವೇನೆಂದರೆ!

ನಾವು ನಿಮಗೆ ಎರಡನೆ ತಾಯಿ ತಂದೆಯರಿದ್ದಾರೆಂದು ಬಹಳ ಬಾರಿ ಹೇಳಿದರೂ ನೀವು ಆಗ ಹಿಡಿಸಿಕೊಳ್ಳಲಿಲ್ಲ. ಈಗ ಅವರ ಆಸ್ತಿ ನಿಮಗೆ ಬರುವುದಿಲ್ಲವೆಂದು ಎನ್ನುತ್ತಲೇ ಆಸ್ತಿ ಹೆಸರು ಹೇಳುತ್ತಿದ್ದಹಾಗೆ ಅವರು ಎಲ್ಲಿರುತ್ತಾರೆ? ಹೇಗೆ ಇರುತ್ತಾರೆ? ಅವರ ಹತ್ತಿರ ನಮಗೆ ಬರುವ ಆಸ್ತಿ ಏನಿದೆ ಎಂದು ಕೇಳುತ್ತಿದ್ದಾರೆ. ಕೃಷ್ಣ ಭಗವಾನನು ಐದು ಸಾವಿರ ವರ್ಷಗಳ ಪೂರ್ವದಲ್ಲಿ ಭಗವದ್ಗೀತೆಯಲ್ಲಿ ತಾಯಿ ತಂದೆಯರ ವಿಷಯವನ್ನು ಹೇಳಿದಾಗಿನಿಂದ ನೀವು ಇಷ್ಟು ಆಸಕ್ತಿಯನ್ನು ತೋರಿಸಬಾರದಾ? ಒಂದು ವೇಳೆ ಆತನು ಹೇಳಿರುವುದು ನಮಗೆ ತಿಳಿದಿಲ್ಲ ಎಂದರೆ, ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಬೈಬಲ್‌ನಲ್ಲಿ ಯೇಸು ಪ್ರಭು "ನಿನ್ನ ತಂದೆ ಪರಲೋಕದಲ್ಲಿದ್ದಾನೆಂದು" ಹೇಳಿದಾಗ, ಆ ತಂದೆಯನ್ನು ಕುರಿತು ಆತನಿಂದ ಬರುವ ಆಸ್ತಿಯನ್ನು ಕುರಿತು ಕೇಳ ಬಾರದಾ? 14 ನೂರು ವರ್ಷಗಳ ಹಿಂದೆ ಖುರಾನ್ ಗ್ರಂಥದಲ್ಲಿ ಮಹಮ್ಮದ್ ಪ್ರವಕ್ತರವರು "ನಿನ್ನನ್ನು ಹುಟ್ಟಿಸಿದವನು ದೇವರೆ" ಎಂದು ಗಟ್ಟಿಯಾಗಿ ಹೇಳಿದಾಗ ಆತನು ಯಾರು? ಆತನ ಆಸ್ತಿ ಏನು ಎಂದು ಚಿಕ್ಕದಾಗಿಯಾದರೂ, ಯಾರಾದರೂ ಕೇಳಿದಿರಾ? ಎಷ್ಟೋ ಜನ ಪ್ರವಕ್ತರು, ಭಗವಂತನು ಗತ ಕಾಲದಲ್ಲಿಯೇ ನಿನ್ನ ನಿಜವಾದ ತಾಯಿ ತಂದೆಯರನ್ನು ಕುರಿತು ಹೇಳಿದ್ದರೂ, ಯಾರೂ ಹೇಳದ ವಿಷಯವನ್ನು ನೀವು ಹೇಳುತ್ತಿದ್ದೀರಾ ಎಂದು ಕೇಳುವುದೇನು? ನಿಮ್ಮ ಹಾಗೆ ಅಸಲಾದ ತಾಯಿ ತಂದೆಯರನ್ನು ಕುರಿತು ಪ್ರಸ್ತುತ ಕಾಲದಲ್ಲಿ ಕೆಲವು ಸ್ವಾಮಿಗಳಿಗೂ ತಿಳಿಯದೇ ಹೋಗಿದೆ. ಆದುದರಿಂದ ಅವರು ಹೇಳದೇ ಹೋದರೆ, ಸತ್ಯವನ್ನು ಹೇಳಿದ ನಾವು ಕಲ್ಪಿಸಿಕೊಂಡು ಹೇಳಿದ ಹಾಗೆಯೆ? ಕೆಲವರು ಅಂದುಕೊಂಡ ಹಾಗೆ ನಾವು ತಾಯಿ ತಂದೆಯರ ವಿಷಯದಲ್ಲಿ ಅಸತ್ಯವನ್ನು ಹೇಳಲಿಲ್ಲ. ಎಷ್ಟೋ ಜನ ವಕ್ತರು, ಪ್ರವಕ್ತರು ಗತದಲ್ಲಿಯೇ ಹೇಳಿದ ವಿಷಯಗಳನ್ನೆ ನಾವು ಸಹ ಹೇಳಿದ್ದೇವೆ. ಈಗ ಆ ತಾಯಿ ತಂದೆಯರ ಮುಖಾಂತರ ಬರುವ ಆಸ್ತಿ ಏನೋ ತಿಳಿಸುತ್ತೇನೆ ಕೇಳಿ.

ಕಾಣಿಸುವ ಶರೀರ ತಾಯಿ ತಂದೆಯರು ಕಾಣಿಸುವ ಆಸ್ತಿಯನ್ನೇ ಕೊಡಬಲ್ಲರು, ಕಾಣಿಸುವ ಆಸ್ತಿ ಧನ, ಕನಕ, ವಸ್ತು, ವಾಹನಗಳಾದ ಚರಾಸ್ತಿ, ಹಾಗೆ ಗೃಹಗಳು, ಭೂಮಿ ಅನ್ನುವ ಸ್ಥಿರಾಸ್ತಿಗಳು ಬಿಟ್ಟು ಏನೂ ಇರುವುದಿಲ್ಲ. ಇದರಲ್ಲಿ ಚರ ಆಸ್ತಿಗಳು ಸ್ವಲ್ಪ, ಸ್ಥಿರ ಆಸ್ತಿಗಳು ಸ್ವಲ್ಪ ಇದ್ದರೂ, ವಾಸ್ತವವಾಗಿ ಎಲ್ಲವೂ ಚರಾಸ್ಥಿಗಳೆಂದೇ ಹೇಳಬಹುದು. ಚರ ಆಸ್ತಿ ಅಂದರೆ ಅಶಾಶ್ವತವಾದದ್ದು, ಬದಲಾವಣೆ ಹೊಂದುವುದೆಂದು ಅರ್ಥ. ಹಾಗೆಯೇ ಸ್ಥಿರಾಸ್ತಿ ಎಂದರೆ ಶಾಶ್ವತವಾಗಿರುವುದೆಂದು, ಬದಲಾವಣೆ ಹೊಂದದೆ ಇರುವುದೆಂದು ಅರ್ಥ. ಹೆಸರಿಗೆ ಭೂಮಿಗಳನ್ನು ಸ್ಥಿರಾಸ್ಥಿಗಳೆಂದು ಕೆಲವರು ಹೇಳಿಕೊಂಡರೂ, ವಾಸ್ತವವಾಗಿ ಅವು ಸಹ ಮನುಷ್ಯನಿಗೆ ಚರಾಸ್ತಿಗಳೆಂದೇ ಹೇಳಬಹುದು. ಅದು ಹೇಗೆಂದರೆ! ಕಾಣಿಸುವ ಶರೀರ ತಾಯಿ ತಂದೆಯರು ಶಾಶ್ವತವಾದವರಲ್ಲ. ಅವರು ಒಂದು ಜನ್ಮಕ್ಕೆ ತಾಯಿ ತಂದೆಯರೇ ಹೊರತು, ಒಂದು ಜನ್ಮದಲ್ಲಿಯೂ ಸಹ ಪೂರ್ತಿಕಾಲವಿರದೆ ಸ್ವಲ್ಪ ಕಾಲವಿದ್ದು ಹೋಗುವವರೆ. ಅಶಾಶ್ವತವಾದವರಿಂದ ಲಭಿಸುವವೂ ಸಹ ಅಶಾಶ್ವತವಾದವುಗಳೇ ಎಂದು ಹೇಳಬಹುದು. ಇದನ್ನನುಸರಿಸಿ ನೋಡಿದರೆ ಇಲ್ಲಿಯವರೆಗೂ ಬಾಹ್ಯ ತಾಯಿ ತಂದೆಯರಿಂದ ಶಾಶ್ವತವಾದದ್ದು ಲಭಿಸಲಿಲ್ಲ. ಈಗ ಕೆಲವರು ಒಂದು ಪ್ರಶ್ನೆ ಕೇಳಬಹುದು. ಮನುಷ್ಯ ಸಹ ಸ್ವಲ್ಪ ಕಾಲವಿದ್ದು ಹೋಗುವವನು ಅಲ್ಲವೆ! ಹೀಗಿರುವಾಗ ಮನುಷ್ಯನೇ ಶಾಶ್ವತವು ಅಲ್ಲದಿರುವಾಗ, ಅವನಿಗೆ ಶಾಶ್ವತವಾದ ಆಸ್ತಿ ಏನಿರಬಹುದು? ಎಂದು ಕೇಳಬಹುದು. ಅದಕ್ಕೆ ಉತ್ತರವನ್ನು ಗಮನಿಸಿದರೆ ಹೀಗಿರುವುದು. ಕಾಣಿಸುವ ಮನುಷ್ಯನಲ್ಲಿ ಶಾಶ್ವತವಾದದ್ದು, ಶಾಶ್ವತವಲ್ಲದ್ದು ಎನ್ನುವ ಎರಡು ಭಾಗಗಳಿವೆ. ಶಾಶ್ವತವಲ್ಲದ್ದು ಮೇಲೆ ಕಾಣಿಸುವ ಶರೀರವೆಂದು ತಿಳಿದುಕೊಂಡಿದ್ದೇವೆ. ಮೇಲೆ ಕಾಣಿಸದ ಜೀವಿಯು ಸೃಷ್ಟ್ಯಾದಿಯಿಂದಲೂ ಇದ್ದಾನೆ. ತಾನು ಧರಿಸಿದ ಎಷ್ಟೋ ಶರೀರಗಳು ನಶಿಸಿಹೋದರೂ, ತಾನು ಮಾತ್ರ ನಾಶವಾಗದೆ ಇದ್ದಾನೆ. ಆದ್ದರಿಂದ ಜೀವಿಯು ಶಾಶ್ವತವಾದವನೆಂದು, ಶರೀರ ಅಶಾಶ್ವತವಾದದ್ದೆಂದು ಹೇಳುತ್ತಿದ್ದೇವೆ. ಅಷ್ಟೇ ಅಲ್ಲದೆ ಒಬ್ಬ ಜೀವಿಯು ಶರೀರವನ್ನು ಧರಿಸಿ ಒಂದು ಕಡೆ ಇರುವುದಿಲ್ಲ.

ಒಂದೊಂದು ಜನ್ಮದಲ್ಲಿ ಒಂದೊಂದು ಪ್ರಾಂತಕ್ಕೆ, ಒಂದೊಂದು ಹೆಸರಿಗೆ ಪರಿಮಿತವಾಗಿ ಹೋಗುತ್ತಿದ್ದಾನೆ. ಪ್ರಾಂತಗಳು, ಹೆಸರುಗಳು, ಶರೀರ ಸ್ವಲ್ಪ ಕಾಲವೇ ಇರುವಾಗ ಜೀವಿಯು ಶಾಶ್ವತವಾಗಿ ಇದ್ದಾನೆ. ಶರೀರದಿಂದ ಕೂಡಿಕೊಂಡಿರುವ ಮನುಷ್ಯ ಅಶಾಶ್ವತವಾದಾಗ, ಅದರಲ್ಲಿನ ಜೀವಾತ್ಮನು ಶಾಶ್ವತವೇ ಎಂದು ತಿಳಿದುಕೊಂಡಿದ್ದೇವೆ ಅಲ್ಲವೆ! ಅದೇ ವಿಧವಾಗಿ ಕಾಣಿಸುವ ಮನುಷ್ಯರಾದ ಅಶಾಶ್ವತ ತಾಯಿ ತಂದೆಯರಿಂದ ಲಭಿಸುವವು ಅಶಾಶ್ವತ ಆಸ್ತಿಗಳೆಂದೇ ಹೇಳಬಹುದು. ಆದರೆ ಶಾಶ್ವತವಾದ ತಾಯಿ ತಂದೆಯರಿಂದ ಲಭಿಸುವ ಆಸ್ತಿ, ಶಾಶ್ವತವಾಗಿಯೇ ಇರುತ್ತದೆನ್ನುವುದು ಸೂತ್ರ. ಅದರ ಪ್ರಕಾರ ಸೃಷ್ಟ್ಯಾದಿಯಲ್ಲಿ ಜೀವಾತ್ಮನಿಗೆ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರು ಎಂದಿಗೂ ಒಂದೇ ತರಹ ಇದ್ದಾರೆ. ಅವರು ಬದಲಾಗಿಲ್ಲ, ಅವರಿಗೆ ಹುಟ್ಟಿದ ಜೀವಾತ್ಮನೂ ಬದಲಾಗಿಲ್ಲ. ಆದ್ದರಿಂದ ಶಾಶ್ವತವಾದ ತಾಯಿ ತಂದೆಯರಿಂದ ಬರುವ ಆಸ್ತಿ ಶಾಶ್ವತವಾದದ್ದೆ ಎಂದು ಹೇಳಿದ್ದೇವೆ.

ಕಾಣಿಸುವ ತಾಯಿ ತಂದೆಯರಿಂದ ಚರ, ಸ್ಥಿರಾಸ್ಥಿಗಳೆನ್ನುವವು ಲಭಿಸಿದರೂ ಅವು ಎಲ್ಲಾ ಚರಾಸ್ತಿಗಳೆಂದೇ ಹೇಳಿದ್ದೇವೆ ಅಲ್ಲವೆ! ಹಾಗೆಯೇ ಪ್ರಕೃತಿ ಪರಮಾತ್ಮರಿಂದ ಆಸ್ತಿಗಳಾಗಿ ಲಭಿಸಿರುವವು ಸಹ ಚರ ಸ್ಥಿರಾಸ್ತಿಗಳೆಂದೇ ಹೇಳಬಹುದು. ದೇವರಿಂದ ಮನುಷ್ಯನಿಗೆ ಲಭಿಸುವವನ್ನೆಲ್ಲಾ ಒಂದು ಪದ್ದತಿ ಪ್ರಕಾರ ಚರ, ಸ್ಥಿರ ಆಸ್ತಿಗಳೆಂದು ಹೇಳಿದರೂ, ಅವುಗಳನ್ನು ಮತ್ತೊಂದು ವಿಧವಾಗಿ ಸ್ಥಿರಾಸ್ತಿಗಳೆಂದೇ ಹೇಳಬಹುದು. ಶಾಶ್ವತವಾದ ತಾಯಿ ತಂದೆಯರಿಂದ ಲಭಿಸುವ ಆಸ್ತಿಗಳು ಶಾಶ್ವತವಾದವುಗಳೆ ಎನ್ನುವ ಸೂತ್ರದ ಪ್ರಕಾರ, ತಂದೆಯಾದ ದೇವರಿಂದ ಲಭಿಸುವ ಚರ ಸ್ಥಿರ ಆಸ್ತಿಗಳೆಲ್ಲ ಶಾಶ್ವತವಾಗಿರುವವೇ ಆಗುವುದು. ದೇವರಿಂದ ಲಭಿಸುವವುಗಳಲ್ಲಿಯೂ ಸಹ ಚರ, ಸ್ಥಿರ ಎನ್ನುವ ಎರಡು ವಿಧಗಳು ಇರುವವೇ? ಎಂದು ಯಾರಾದರೂ ಕೇಳಿದರೆ ಈ ವಿಧವಾಗಿ ಉತ್ತರ ಹೇಳಬಹುದು. ದೇವರಿಂದ ಲಭಿಸುವವುಗಳಲ್ಲಿ ಒಂದು ಜೀವನ ಕಾಲವೆಲ್ಲ ಇರುವವು ಚರಾಸ್ಥಿಗಳೆಂದು, ಒಂದು ಜೀವನ ಎನ್ನುವ ಅಳತೆ ಇಲ್ಲದೆ ಶಾಶ್ವತವಾಗಿ

ಇರುವುದು ಸ್ಥಿರಾಸ್ತಿ ಎಂದು ಹೇಳಬಹುದು. ಒಂದು ಜೀವನ ಕಾಲದಲ್ಲಿ ಮಾತ್ರವಿದ್ದು, ಮರಣ ಸಮಯದಲ್ಲಿ ಹೋಗುವವು ಚರಾಸ್ತಿಗಳೆಂದು ಹೇಳಬಹುದು. ಅವು ನಮ್ಮ ಶರೀರದಲ್ಲಿ ಜನ್ಮದೊಂದಿಗೆ ಲಭಿಸಿದ್ದರೂ ಕಾಣಿಸುವ, ಕಾಣಿಸದೆ ಇರುವ ಎರಡು ವಿಧವಾದ ಅವಯವಗಳೆಂದು ಹೇಳಬಹುದು. ಅಂತಹ ಚರಾಸ್ತಿಗಳಲ್ಲಿ ಮುಖ್ಯವಾದವುಗಳು ಗುಂಡಿಗೆ, ಮೂತ್ರಪಿಂಡಗಳು, ಪಿತ್ತಕೋಶ, ಶ್ವಾಸಕೋಶಗಳು ಮುಂತಾದವು ಎಷ್ಟೋ ಇರುವವು. ಇವೆಲ್ಲವೂ ಒಂದು ಜನ್ಮಕ್ಕೆ ಪರಿಮಿತವಾಗಿದ್ದರೂ, ನಂತರ ಜನ್ಮದಲ್ಲಿಯೂ ಸಹ ಅಂತಹ ಅವಯವಗಳನ್ನೇ ದೇವರು ಕೊಡುತ್ತಿದ್ದಾನೆ. ಶರೀರದಲ್ಲಿ ಅವಯವಗಳೆಲ್ಲಾ ಒಂದು ಜನ್ಮಕ್ಕೆ ಪರಿಮಿತವಾಗಿರುವವಾದರೂ, ಎಲ್ಲಾ ಜನ್ಮಗಳಲ್ಲಿಯೂ ಅವೇ ಅವಯವಗಳು ಲಭಿಸುವುದರಿಂದ, ಅವುಗಳನ್ನು ಸಹ ಒಂದು ವಿಧವಾಗಿ ಶಾಶ್ವತವಾದ ಆಯಾ ದಾಖಲಾತಿಯಲ್ಲಿ ಸೇರಿಸಿ ಹೇಳಬಹುದು.

ಇನ್ನೂ ದೇವರಿಂದ ಲಭಿಸುವ ಶಾಶ್ವತವಾದದ್ದು ಒಂದು ಇದೆ. ಅದಕ್ಕಿಂತ ಮೀರಿರುವುದು ಅದಕ್ಕಿಂತ ಮಿಗಿಲಾದದ್ದು ಏನೂ ಇರುವುದಿಲ್ಲ. ಅದೇ ಮೋಕ್ಷ, ಮೋಕ್ಷವನ್ನೇ ಮುಕ್ತಿ ಎಂದೂ ಸಹ ಎನ್ನುತ್ತಾರೆ. ಒಂದು ಬಾರಿ ಮುಕ್ತಿ ಲಭಿಸಿದರೆ ಅದು ನಿನ್ನ ಹತ್ತಿರ ಶಾಶ್ವತವಾಗಿ ಇರುವುದು. ಅದು ಲಭಿಸಿದನಂತರ ಜನ್ಮ ಜನ್ಮಕ್ಕೂ ಬದಲಾಗುವ ಚರಾಸ್ತಿಗಳಿಂದ ಕೆಲಸವಿಲ್ಲ. ಆದ್ದರಿಂದ ಮುಕ್ತಿ ಲಭಿಸಿದವನಿಗೆ ಜನ್ಮಗಳೇ ಇರುವುದಿಲ್ಲ. ಮೋಕ್ಷವು ಒಂದು ಬಾರಿ ಲಭಿಸಿದರೆ, ಅದು ಪೂರ್ತಿ ಸ್ಥಿರಾಸ್ತಿಯಾಗಿರುತ್ತದೆ. ಎಷ್ಟೋ ದೊಡ್ಡ ಸ್ಥಿರಾಸ್ತಿಯಾದ ಮೋಕ್ಷವು ದೇವರಾದ ತಂದೆಯಿಂದ ಲಭಿಸುವಂತದ್ದಾದರೂ, ಅದು ಅಷ್ಟು ಸುಲಭವಾಗಿ ಯಾರಿಗೂ ಲಭಿಸುವುದಿಲ್ಲ. ನೀನು ನಿಜವಾಗಿ ಸೃಷ್ಟ್ಯಾದಿಯಿಂದ ಯಾರ ಕುಮಾರನೆಂದು ತಿಳಿದು, ಇಂತಹವನೇ ನನಗೆ ಶಾಶ್ವತ ತಂದೆ ಎಂದು ತಿಳಿದು, ಮೌನವಾಗಿ ಇರುವ ದೇವರ ಹತ್ತಿರ ನಾನು ನಿನ್ನ ಕುಮಾರನೆಂದು, ನೀನೇ ನನಗೆ ನಿಜವಾದ ಶಾಶ್ವತವಾದ ತಂದೆಯೆಂದು ಒಪ್ಪಿಕೊಂಡು, ಹೇಳಿಕೊಂಡು ಅದಕ್ಕೆ ಸರಿಯಾದ ಸಾಕ್ಷ್ಯಾಧಾರಗಳೆಲ್ಲವನ್ನು

ದೇವರಿಗೆ ತೋರಿಸಿದರೆ, ಮನುಷ್ಯ ಹೇಳುವುದೆಲ್ಲ ಮನಸ್ಫೂರ್ತಿಯಾಗಿ ಹೇಳುತ್ತಿದ್ದಾನೆಂದು ದೇವರಿಗೆ ತಿಳಿದರೆ, ಆಗ ಆತನಿಂದ ಮೋಕ್ಷ ಲಭಿಸುತ್ತದೆ. ಮನುಷ್ಯ ಹೇಳುವುದು ಪೂರ್ತಿ ಸತ್ಯವೆಂದು ತಿಳಿದು ದೇವರು ಮನುಷ್ಯನಿಗೆ ಮೋಕ್ಷ ಕೊಟ್ಟರೆ, ಅದು ಲಭಿಸಿದ ಮನುಷ್ಯ ತಿರುಗಿ ಜನ್ಮಿಸದೆ ದೇವರ ಸನ್ನಿಧಾನವಾದ ಪರಲೋಕವನ್ನು ಸೇರುವನು. ಪರಲೋಕವನ್ನು ಸೇರಿದವನು ಯಾರಾದರೂ ಅಲ್ಲಿಯವರೆಗೂ ಇದ್ದ ತನ್ನ ಸ್ಥಿತಿಯನ್ನು ಕಳೆದುಕೊಂಡು, ದೈವಸ್ಥಿತಿಯಾಗಿ ಬದಲಾಗಿ ಪರಲೋಕವನ್ನು ಸೇರುವನು. ದೇವರ ಆಸ್ತಿಯಾದ ಮೋಕ್ಷವನ್ನು ಹೊಂದಿದವನು, ದೇವರಷ್ಟಲ್ಲದೆ ತಾನೇ ದೇವರಾಗಿ ಬದಲಾಗುವನು. ಒಬ್ಬ ಮನುಷ್ಯ ಮೋಕ್ಷವನ್ನು ಹೊಂದಿದರೆ, ಅವನು ದೇವರಾಗಿ ಹೋದರೆ, ಅಲ್ಲಿಯವರೆಗೂ ಇದ್ದ ದೇವರೇನಾಗುತ್ತಾನೆ? ಆಗ ಇಬ್ಬರು ದೇವರಾಗುತ್ತಾರಾ? ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವೇನೆಂದರೆ! ಸೃಷ್ಟ್ಯಾದಿಯಿಂದ ದೇವರು ಒಬ್ಬನೇ ಇರುತ್ತಾನೆ. ಆದರೆ ಮನುಷ್ಯ ಮೋಕ್ಷ ಹೊಂದಿದರೆ ಇಬ್ಬರು ದೇವರುಗಳು ಆಗುವುದಿಲ್ಲ. ಎಷ್ಟು ಜನ ಮೋಕ್ಷವನ್ನು ಹೊಂದಿದರೂ ಅವರೆಲ್ಲರೂ, ಇದ್ದ ದೇವರೊಳಗೆ ಬೆರೆತು ಹೋಗಿ ಅವರೂ ಸಹ ದೇವರಾಗಿ ಹೋಗುತ್ತಾರೆ. ಸಾವಿರ ಜನ ಜೀವಿಗಳು ಮೋಕ್ಷವನ್ನು ಹೊಂದಿದರೂ ಅವರೆಲ್ಲರು ಒಬ್ಬ ದೇವರೊಳಗೇ ಸೇರಿಹೋಗು ವರು. ಎಷ್ಟು ನದಿಗಳು ಸಮುದ್ರವನ್ನು ಸೇರಿದರೂ ಎಲ್ಲವೂ ಸಮುದ್ರವಾಗಿ ಬದಲಾಗುತ್ತವೆ ಅಲ್ಲವೆ! ನದಿಗಳು ಸಮುದ್ರವನ್ನು ಸೇರಿದನಂತರ ಅಲ್ಲಿಯವರೆಗು ತಮಗಿರುವ ಹೆಸರನ್ನು ಸ್ಥಿತಿಯನ್ನು ಕಳೆದುಕೊಂಡ ನದಿಗಳು ಸಮುದ್ರ ಸ್ಥಿತಿಯಾಗಿ, ಸಮುದ್ರ ಎನ್ನುವ ಹೆಸರಾಗಿ ಬದಲಾಗುತ್ತದೆ ಅಲ್ಲವೇ! ಅದೇ ವಿಧವಾಗಿ ಶರೀರವನ್ನು ಧರಿಸಿದವರೆಲ್ಲ ಮೋಕ್ಷವನ್ನು ಸೇರಿದರೂ, ಅವರೆಲ್ಲರೂ ದೇವರಾಗಿಯೇ ಇರುವರು. ಸಮುದ್ರದಲ್ಲಿ ನದಿಯನ್ನು ಹೇಗೆ ನಾವು ಗುರುತಿಸಲಾರೆವೋ, ಹಾಗೆ ದೇವರಲ್ಲಿ ಸೇರಿದವನನ್ನು ಇಂತಹವನೇ ಎಂದು ಗುರುತಿಸಲಾರೆವು. ಎಷ್ಟು ನದಿಗಳು ಸೇರಿದರೂ ಮೊದಲಿನಿಂದ ಇದ್ದ ಸಮುದ್ರ ತನ್ನ ಸ್ಥಾನವನ್ನಾಗಲಿ, ಸ್ಥಿತಿಯನ್ನಾಗಲಿ, ತನ್ನ

ಸಾಂಧ್ರತೆಯನ್ನಾಗಲಿ ಹೇಗೆ ಕಳೆದುಕೊಳ್ಳುವುದಿಲ್ಲವೋ, ಅದೇ ವಿಧವಾಗಿ ಎಷ್ಟು ಜೀವಿಗಳು ದೇವರೊಳಗೆ ಸೇರಿದರೂ ದೇವರು ತನ್ನ ಸ್ಥಿತಿಯನ್ನಾಗಲಿ, ತನ್ನ ಧರ್ಮವನ್ನಾಗಲಿ ಕಳೆದುಕೊಳ್ಳುತ್ತಿಲ್ಲ. ಸಮುದ್ರವನ್ನು ಸೇರಿದ ಯಾವ ನದಿ ಆದರೂ ಮಾಯವಾಗಿ ಹೋದಹಾಗೆ, ದೇವರನ್ನು ಸೇರಿದ ಯಾರಾದರೂ ಅಲ್ಲಿಯವರಿಗಿದ್ದ ತನ್ನ ಸ್ಥಿತಿಯನ್ನು, ಹೆಸರನ್ನು ಕಳೆದುಕೊಳ್ಳುವನು.

ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿಯೋಗ ಎನ್ನುವ ಅಧ್ಯಾಯ ದಲ್ಲಿ ಏಳನೇ ಶ್ಲೋಕ ಈ ವಿಧವಾಗಿದೆ.

**ಶ್ಲೋ॥ ಮಮೈವಾಂಶೋ ಜೀವಲೋಕೇ ಜೀವಭೂತ ಸ್ಸನಾತನಃ ।**
**ಮನಷ್ಷಷ್ಠಾಣೀಂದ್ರಿಯಾಣಿ ಪ್ರಕೃತಿ ಸ್ಥಾನಿ ಕರ್ಷತಿ॥**

**ಭಾವಾರ್ಥ :–** ಜೀವಾತ್ಮ ನನ್ನ ಅಂಶದಿಂದಲೇ ಪ್ರಕೃತಿಯಲ್ಲಿ ಹುಟ್ಟಿದಾಗಲೆ ಅದು ಕರ್ಮದಿಂದ ಕೂಡಿಕೊಂಡಿದ್ದೂ, ಮನಸ್ಸು ಮೊದಲಾದ ಇಂದ್ರಿಯಗಳಿಂದ ಬಂಧಿಸಲ್ಪಟ್ಟು ಜನ್ಮಗಳಿಗೆ ಆಕಡೆ, ಈಕಡೆ ಎಳೆಯಲ್ಪಡುತ್ತಿದೆ.

ಮೇಲಿನ ಶ್ಲೋಕದಲ್ಲಿ ದೇವರು ಹೇಳಿದ ಹಾಗೆ ಜೀವಾತ್ಮನಾದವನು ಮೊದಲು ಪರಮಾತ್ಮನಿಂದ ಪರಮಾತ್ಮ ಅಂಶದಿಂದ ಹುಟ್ಟಿದವನೇ ಎಂದು ತಿಳಿಯುತ್ತಿದೆ. ಪರಮಾತ್ಮ (ದೇವರ)ನಲ್ಲಿ ಸೂಕ್ಷ್ಮಾತಿ ಸೂಕ್ಷ್ಮವಾದ ಒಂದು ಭಾಗದಿಂದ ಹುಟ್ಟಿದವನೆ ಒಬ್ಬ ಮನುಷ್ಯ, ಆದ್ದರಿಂದ ಮೇಲಿನ ಶ್ಲೋಕದಲ್ಲಿ "ಮಮೈವಾಂಶೋ ಜೀವಲೋಕೇ ಜೀವಭೂತ" ಎಂದು ಹೇಳಲಾಗಿದೆ. ಒಬ್ಬ ಜೀವಾತ್ಮನು ಭೂಮಿಮೇಲೆ ಯಾವ ಮನುಷ್ಯನಾಗಿ ಇದ್ದರೂ, ಆತನು ಸಮುದ್ರದ ನೀರು ಮಳೆಯ ಬಿಂದುವು ಆದ ಹಾಗೆ, ದೇವರಿಂದ ಬಂದ ಅಂಶವೆಂದೇ ತಿಳಿಯುತ್ತಿದೆ. ದೇವರಿಂದ ಬೇರ್ಪಟ್ಟ ದೇವರ ಅಂಶವಾದ ಜೀವಿಯು ಕರ್ಮದಿಂದ ಬಂಧಿತವಾಗಿದ್ದು, ಎಷ್ಟೋ ಜನ್ಮಗಳು ಹೊಂದಿ, ಕೊನೆಗೆ ಕರ್ಮವನ್ನು ತಿಳಿದುಕೊಂಡು, ಅದರಿಂದ ಹೊರಬಂದು, ತಿರುಗಿ ತನ್ನ ಮೊದಲ ಸ್ಥಾನವಾದ ದೇವರನ್ನು ಸೇರುತ್ತಿದ್ದಾನೆ. ಕರ್ಮ ಬಂಧನವಿಲ್ಲದ ಜೀವಿಯು

ದೇವರನ್ನು ಸೇರಿದಾಗ, ಜೀವಿಯು ದೇವರ ಅಂಶವಾದ್ದರಿಂದ, ಸುಲಭವಾಗಿ ದೇವರಲ್ಲಿ ಸೇರಿ ಹೋಗುತ್ತಿದ್ದಾನೆ. ಅದನ್ನೇ ಜೀವ ಬ್ರಹ್ಮಐಕ್ಯ ಸಂಧಾನವೆಂದು ಹೇಳಬಹುದು. ಕರ್ಮಬಂಧದಿಂದ ಹೊರಬೀಳುವುದನ್ನೇ ಮುಕ್ತಿ ಅಥವಾ ಮೋಕ್ಷ ಎನ್ನಬಹುದು. ದೇವರ ಅಂಶವಾದ ಜೀವಿಯು ಕರ್ಮದಿಂದ ಬಂಧಿತನಾಗಿ, ಅನೇಕ ಜನ್ಮಗಳನ್ನು ಹೊಂದಿ, ಯಾವಾಗಲೋ ಒಂದು ಸಮಯದಲ್ಲಿ ತನ್ನ ಜ್ಞಾನವನ್ನು ತಾನು ತಿಳಿದುಕೊಂಡು, ಕರ್ಮ ಎನ್ನುವ ಜೈಲಿನಿಂದ ಬಿಡುಗಡೆ (ಮುಕ್ತಿ) ಹೊಂದಿ, ಮೊದಲ ಸ್ಥಾನವಾದ ತನ್ನ ಸ್ಥಾನವನ್ನು ತಾನು ಸೇರಿ, ಮೊದಲು ತಾನು ಯಾರಾಗಿದ್ದನೋ ಆತನಾಗಿಯೇ (ದೇವರಾಗಿಯೇ) ಮಾರ್ಪಾಟಾಗುತ್ತಾನೆ.

ಈಗ ನಿಮ್ಮ ಕಡೆಯಿಂದ ನಾನೇ (ಜೀವಿಯು) ಒಂದು ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಅದೇನೆಂದರೆ! ಶರೀರ ತಾಯಿ ತಂದೆಯರು ತಮ್ಮ ಕುಮಾರನಿಗೆ ಆಸ್ತಿ ಕೊಟ್ಟಾಗ ಒಂದು ಚರಾಸ್ಥಿಯೇ ಅಲ್ಲದೆ, ಸ್ಥಿರಾಸ್ತಿಯನ್ನು ಸಹ ಕೊಡುವುದು ನಡೆಯುತ್ತಿದೆ. ಒಂದು ಬಾರಿ ತಂದೆ ಆಸ್ತಿಯನ್ನು ಕೊಟ್ಟರೆ ಎರಡು ವಿಧಗಳ ಆಸ್ತಿಗಳನ್ನು ಕೊಡುವನು. ಆದರೆ ಮೊದಲು ಒಂದನ್ನು ಕೊಟ್ಟು ನಂತರ ಸ್ವಲ್ಪ ಕಾಲಕ್ಕೆ ಮತ್ತೊಂದು ಕೊಡುವುದಿಲ್ಲ. ಆದರೆ ಮನುಷ್ಯನಿಗೆ ದೇವರು ಮೊದಲ ಶರೀರದಲ್ಲಿನ ಅವಯವಗಳನ್ನು ಚರಾಸ್ತಿಗಳಾಗಿ ಕೊಟ್ಟು, ನಂತರ ಎಷ್ಟೋ ಜನ್ಮಗಳು ಕಳೆದ ನಂತರ ಜೀವಾತ್ಮ ಇಷ್ಟವಾಗಿ ಕೋರಿಕೊಂಡರೆ, ಅದೂ ಜೀವಾತ್ಮನ ಕೋರಿಕೆಯನ್ನು ತಾನು ಒಪ್ಪಿಕೊಂಡರೆ, ಆಗ ಸ್ಥಿರಾಸ್ತಿಯಾದ ಮೋಕ್ಷವನ್ನು ಕೊಡುವನೆಂದು ನೀವು ತಿಳಿಸಿದ್ದೀರಿ. ಶರೀರ ತಂದೆ ಕೊಟ್ಟಹಾಗೆ ಜೀವಿಯ ತಂದೆಯಾದ ದೇವರು ಎರಡು ವಿಧಗಳ ಆಸ್ತಿಗಳನ್ನು ಒಂದೇ ಬಾರಿ ಏಕೆ ಕೊಟ್ಟಿಲ್ಲ? ಎಂದು ಕೇಳುತ್ತಿದ್ದೇನೆ. ಅದಕ್ಕೆ ಸಮಾಧಾನ ನನ್ನ ಪಕ್ಕದಲ್ಲಿರುವ ನನ್ನ ಹಿತನು (ಆತ್ಮ) ಹೀಗೆ ಹೇಳುತ್ತಿದ್ದಾನೆ. ಬಾಹ್ಯವಾಗಿ ಕಾಣಿಸುವ ಶರೀರ ತಂದೆ ಕೊಟ್ಟಿರುವ ಚರ, ಸ್ಥಿರ ಎನ್ನುವ ಎರಡು ವಿಧಗಳ ಆಸ್ತಿಗಳು ಒಬ್ಬ ಮನುಷ್ಯ ಹೊಂದಿದ ನಂತರ ಆತನ ಹತ್ತಿರವಿರುವ ಚರಾಸ್ತಿಯನ್ನು

ಸ್ಥಿರಾಸ್ತಿಯಾಗಿ ಬದಲಾಯಿಸಿಕೊಳ್ಳಬಹುದು. ಹಾಗೆ ತನಗಿರುವ ಸ್ಥಿರಾಸ್ತಿಯನ್ನು ಸಹ ಚರಾಸ್ತಿಯಾಗಿ ಬದಲಾಯಿಸಿಕೊಳ್ಳಬಹುದು. ಚರಾಸ್ತಿಯಾದ ಹಣದಿಂದ ಸ್ಥಿರಾಸ್ತಿಯಾದ ಭೂಮಿಗಳನ್ನು, ಗೃಹಗಳನ್ನು ಕೊಂಡು ಚರಾಸ್ತಿಯನ್ನು ಸ್ಥಿರಾಸ್ತಿಯಾಗಿ ಬದಲಾಯಿಸಿಕೊಳ್ಳಬಹುದು. ಹಾಗೆ ಸ್ಥಿರಾಸ್ತಿಯಾದ ಭೂಮಿಯನ್ನು ಗೃಹಗಳನ್ನು ಮಾರಿ ಚರಾಸ್ತಿಯಾದ ಹಣವಾಗಿ ಬದಲಾಯಿಸಿಕೊಳ್ಳಬಹುದು. ಆದರೆ ದೇವರು ಕೊಟ್ಟಿರುವ ಚರಾಸ್ತಿಯನ್ನು ಸ್ಥಿರಾಸ್ತಿಯಾಗಿ ಬದಲಾಯಿಸಿ ಕೊಳ್ಳಲಾರೆವು. ಹಾಗೆ ದೇವರುಕೊಟ್ಟಿರುವ ಸ್ಥಿರಾಸ್ತಿಯನ್ನು ಸಹ ಚರಾಸ್ತಿಯಾಗಿ ಮಾಡಿಕೊಳ್ಳಲಾರೆವು.

ಇನ್ನೂ ವಿವರವಾಗಿ ಹೇಳಿಕೊಂಡರೆ ಕಾಣಿಸುವ ತಂದೆ ಒಂದು ಬಾರಿ ಎರಡು ವಿಧವಾದ ಅಸ್ತಿಗಳನ್ನು ಕೊಟ್ಟಹಾಗೆ, ಕಾಣಿಸದ ತಂದೆಯಾದ ದೇವರು ಎರಡು ಆಸ್ತಿಗಳನ್ನು ಒಂದೇಬಾರಿ ಕೊಡುವುದಿಲ್ಲ. ಮೊದಲು ಚರಾಸ್ತಿಯನ್ನು ಮಾತ್ರ ಕೊಡುವನು. ಚರಾಸ್ತಿಯಿಂದ ಮನುಷ್ಯ ಜೀವನವನ್ನು ಸಾಗಿಸುತ್ತಿರುವನು. ಯಾವ ಮನುಷ್ಯನಾದರೂ ನನಗೆ ಚರಾಸ್ತಿ ಬೇಡ, ನನಗೆ ಸ್ಥಿರಾಸ್ತಿಯೇ ಬೇಕು ಎಂದು ಕೋರಿಕೊಂಡಾಗ, ಆತನು ಪೂರ್ಣ ಇಚ್ಛೆಯಿಂದ ಸ್ಥಿರಾಸ್ತಿಯನ್ನು ಕೋರಿದ್ದರೆ ಆತನಿಗಿರುವ ಚರಾಸ್ತಿಯನ್ನು ತೆಗೆದುಕೊಂಡು, ಸ್ಥಿರಾಸ್ತಿಯನ್ನು ದೇವರು ಕೊಡುವುದು ನಡೆಯುತ್ತದೆ. ದೇವರು ಕೊಡುವ ಎರಡು ಆಸ್ತಿಗಳಲ್ಲಿ ಒಂದು ಇದ್ದರೆ ಎರಡನೆಯದು ಇರುವುದಿಲ್ಲ. ದೇವರು ಕೊಡುವ ಎರಡು ಆಸ್ತಿಗಳು ಪರಸ್ಪರ ವಿರುದ್ಧವಾದವುಗಳು. ಚರಾಸ್ತಿಯಾದ ಶರೀರವಿದ್ದರೆ ಸ್ಥಿರಾಸ್ತಿಯಾದ ಮೋಕ್ಷವಿರುವುದಿಲ್ಲ. ಒಂದು ವೇಳೆ ಸ್ಥಿರಾಸ್ತಿಯಾದ ಮೋಕ್ಷವು ಲಭಿಸಿದರೆ ಚರಾಸ್ತಿಯಾದ ಶರೀರ ಇರುವುದಿಲ್ಲ. ಇದು ಹೀಗೆ ಇರುವಾಗ ಜೀವಿಯ ತಂದೆಯಾದ ದೇವರು, ಮೊದಲು ಮನುಷ್ಯರೆಲ್ಲರಿಗೂ ಚರಾಸ್ತಿಯಾದ ಶರೀರವನ್ನು ಕೊಟ್ಟಿದ್ದಾನೆ. ಹಾಗೆ ಕೊಟ್ಟಿರುವ ಶರೀರದಿಂದಲೇ ಮನುಷ್ಯ ತೃಪ್ತಿಪಟ್ಟು ಜೀವಿಸುತ್ತಿದ್ದಾನೆ. ಶರೀರದೊಳಗಿರುವ ಮನುಷ್ಯ (ಜೀವಿಯು) ಎರಡನೆ ಆಸ್ತಿ ವಿಷಯವನ್ನೇ ಮರೆತು ಹೋಗಿದ್ದಾನೆ. ಎರಡನೆ ವಿಧವಾದ

ಆಸ್ತಿಯಾದ ಮೋಕ್ಷವು ನನಗೆ ಅಗತ್ಯವೆ ಇಲ್ಲವೆಂದು ಕೆಲವರು ಅನ್ನುತ್ತಾರೆ. ಕೆಲವರಾದರೆ ಶರೀರದಿಂದ ಸಾಯುತ್ತಾ ಬದುಕುತ್ತಾ ಹೀಗೆ ಕಾಲ ಕಳೆಯುವುದೆ ಒಳ್ಳೆಯದು ಅಲ್ಲವೆ! ಯಾವ ಕೆಲಸವಿಲ್ಲದ ಮೋಕ್ಷವನ್ನು ಹೊಂದಿದರೆ ಕಾಲ ಹೇಗೆ ಕಳೆಯುತ್ತದೆ ಎಂದು ಅನ್ನುತ್ತಿದ್ದಾರೆ. ಅಂತಹವರು ಮೋಕ್ಷವನ್ನು ಕೋರುವುದಿಲ್ಲ. ಮೋಕ್ಷವನ್ನು ಇಷ್ಟದಿಂದ ಕೋರಿದರೆ ದೇವರು ಕೊಡುತ್ತಾನೆ. ಅದರೆ ಅದನ್ನು ಕೋರದಿದ್ದರೂ, ಅಯಿಷ್ಟದಿಂದ ಕೋರಿದರೂ ದೇವರು ಕೊಡುವುದಿಲ್ಲ. ದೇವರು ಕೊಡುವ ಎರಡು ವಿಧಗಳ ಅಸ್ತಿಗಳಲ್ಲಿ ಒಂದನ್ನು ಕೋರದಿದ್ದರೂ ಕೊಡುವನು. ಎರಡನೆಯದನ್ನು ಕೋರಿದರೂ ಅವನಿಗಿರುವ ಶ್ರದ್ಧೆಯನ್ನನುಸರಿಸಿ ಕೊಡುವನು. **ಶ್ರದ್ಧಾ ಲೋಪವು ಸ್ವಲ್ಪವಿದ್ದರೂ ದೇವರು ಕೊಡುವ ಮೋಕ್ಷವು ಲಭಿಸುವುದಿಲ್ಲ.**

ಇನ್ನೂ ಕೆಲವರಾದರೆ ದೇವರು ಕೊಟ್ಟ ಚರಾಸ್ತಿಯಾದ ಶರೀರ ಇರಬೇಕೆಂದು ಕೋರುತ್ತಾ, ಎರಡನೇ ವಿಧವಾದ ಮೋಕ್ಷವನ್ನು ಸಹ ಕೋರುತ್ತಿದ್ದಾರೆ. ಆದರೆ ಹಾಗೆ ಕೊಡುವುದಕ್ಕೆ ದೇವರು ಒಪ್ಪಿಕೊಳ್ಳುವುದಿಲ್ಲ. ದೇವರು ಮುಂಚೆಯೆ, ಒಂದು ಇದ್ದರೆ ಮತ್ತೊಂದು ಇರುವುದಿಲ್ಲವೆಂದು ಶಾಸನ ಮಾಡಿದ್ದಾನೆ. ಆ ಶಾಸನದ ಪ್ರಕಾರ ಶರೀರವಿರುವಾಗಲೇ ಮೋಕ್ಷವು ಯಾರಿಗೂ ಲಭಿಸುವುದಿಲ್ಲ. ಶರೀರವನ್ನು ಕೋರುವವರು ಮೋಕ್ಷವನ್ನು ಕೋರುವುದಿಲ್ಲ. ಕೋರಿಕೊಂಡರೂ ಅವರಿಗೆ ಮೋಕ್ಷವು ಲಭಿಸುವುದಿಲ್ಲ. ಕೆಲವರಿಗಾದರೆ ಅವರಿಗೆ ಕಾಣಿಸದ ತಂದೆ ಒಬ್ಬನಿದ್ದಾನೆಂದಾಗಲಿ, ಆತನಿಂದ ಮೋಕ್ಷವು ಲಭಿಸುತ್ತದೆಂದಾಗಲಿ ಏನೂ ತಿಳಿಯದು. ಅಂತಹವರು ಎರಡನೇ ಆಸ್ತಿಯಾದ ಮೋಕ್ಷವನ್ನು ಕೋರುವ ಪ್ರಸಕ್ತಿಯೇ ಇಲ್ಲ. ಅವರು ಶಾಶ್ವತವಾಗಿ ಜನನ ಮರಣಗಳನ್ನು ಹೊಂದುತ್ತಿರುವರು. ಅಂತಹವನಿಗೆ ದೇವರು ಯಾರೆಂದು ಸಹ ತಿಳಿಯದು. ಆದ್ದರಿಂದ ಅವರು ದೇವರನ್ನು ಸಹಾ ನಿಂದಿಸುವ ಸ್ಥಿತಿಯಲ್ಲಿ ಇರುತ್ತಾರೆ. ಅವರು ದೇವರನ್ನು ನಿಂದಿಸಿದರೆ, ಅವರಿಗೆ ದೇವರು ತಪ್ಪದೆ ಶಿಕ್ಷೆಯನ್ನು ವಿಧಿಸುವನು. ಭೂಮಿಮೇಲೆ ಕೆಲವರು ಕಾಣಿಸುವ ತಾಯಿ ತಂದೆಯರ

ಆಸ್ತಿಗಳನ್ನು ಅನುಭವಿಸುತ್ತಾ, ಆ ಆಸ್ತಿಗಳನ್ನು ತಮ್ಮ ಹಕ್ಕೆಂದು ತಿಳಿದು, ತಾಯಿ ತಂದೆಯರು ನಮಗೆ ಕೊಟ್ಟಿರುವವೇ ಈ ಆಸ್ತಿಗಳೆಂದು ಎಂದುಕೊಳ್ಳದೆ, ಈಗಿರುವ ಆಸ್ತಿಗಳಿಗಿಂತ ಇನ್ನೂ ಶ್ರೇಷ್ಠವಾದವುಗಳನ್ನು ಕೊಡಲಿಲ್ಲವೆಂದು, ತಮ್ಮ ತಾಯಿ ತಂದೆಯರನ್ನು ಅಸಮರ್ಥರೆಂದು ಚಿತ್ರಿಸಿ ಮಾತನಾಡುತ್ತಿರುತ್ತಾರೆ. ಅದೇ ವಿಧವಾಗಿ ದೇವರ ಬೆಲೆಯನ್ನು, ಜ್ಞಾನವನ್ನು ಗುರ್ತಿಸದ ಮನುಷ್ಯರು ಸ್ವಲ್ಪ ವಯಸ್ಸು ಕಳೆದ ನಂತರ ವೃದ್ಧಾಪ್ಯದಲ್ಲಿ ಕಣ್ಣು ಕಾಣಿಸದೆ ಹೋದರೆ, ಮೊಣಕಾಲಿನ ನೋವು ಬಂದರೆ, ಶರೀರ ಮೆತ್ತಗಾಗಿಹೋದರೆ, ದೇವರು ಇಂತಹ ಶರೀರವನ್ನು ಏಕೆ ಕೊಡಬೇಕು? ಕಪ್ಪು ಕಲ್ಲಿನಿಂದ ಮಾಡಿರುವ ಶರೀರವನ್ನು ಕೊಡಬಾರದಾ! ಅಥವಾ ಯಾವುದೋ ಒಂದು ಲೋಹದಿಂದ ಮಾಡಿರುವ ಶರೀರವನ್ನು ಕೊಡಬಾರದಾ? ಈ ವಿಧವಾಗಿ ಮೊಣಕಾಲು ಸವೆದು ಹೋಗುವ, ಮೂಳೆಗಳು ಮುರಿದು ಹೋಗುವ, ಕಂಡರಗಳು ಕರಗಿ ಹೋಗುವ ಶರೀರವನ್ನು ಕೊಡು ಎಂದು, ಅಸಲಿಗೆ ಇಂತಹ ಶರೀರವನ್ನು ತಯಾರು ಮಾಡು ಎಂದು ಯಾರು ಸಲಹೆ ಕೊಟ್ಟಿದ್ದಾರೋ! ಎಂದು ಕೇಳುವವರು ಸಹ ಇದ್ದಾರೆ. ಈ ವಿಧವಾಗಿರುವ ಆಸ್ತಿಯನ್ನು ಬಿಟ್ಟು ಇಲ್ಲದ ಆಸ್ತಿಯನ್ನು, ಇನ್ನೂ ಸುಖ ಕೊಡುವ ಆಸ್ತಿಯನ್ನು ಬೇಕೆಂದು ಕೋರಿಕೊಳ್ಳುವವರಿದ್ದಾರೆ. ಹಾಗೆ ಕೋರುವುದರಲ್ಲಿ ತಪ್ಪಿಲ್ಲ, ಅದರೆ ತಮಗಿರುವ ಆಸ್ತಿಯ ಬೆಲೆಯನ್ನು ತಿಳಿದುಕೊಳ್ಳದೆ ಹೋಗುವುದು ತಪ್ಪಾಗುತ್ತದೆ. ತಮಗೆ ಕೊಟ್ಟಿರುವ ಶರೀರದೊಳಗಿನ ಬುದ್ಧಿ ಎನ್ನುವ ಆಸ್ತಿಯನ್ನು ಪ್ರಪಂಚದಲ್ಲಿ ಯಾವ ಜೀವರಾಶಿಗಳಿಗೂ ಕೊಟ್ಟಿಲ್ಲವೆಂದು, ತಮಗಿರುವ ಯೋಚನಾಶಕ್ತಿ ಯಾವ ಜಾತಿ ಜಂತುಗಳಿಗೂ ಸಹ ಇಲ್ಲವೆಂದು, ಅಂತಹ ಬುದ್ಧಿಯನ್ನು ಕೊಟ್ಟಿರುವುದಕ್ಕೆ ತಮ್ಮ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರನ್ನು ಎಷ್ಟೋ ದೊಡ್ಡವರೆಂದು, ಎಲ್ಲದಕ್ಕೂ ಸಮರ್ಥರೆಂದು ಯಾರೂ ಅಂದುಕೊಳ್ಳುವುದಿಲ್ಲ. ಸೃಷ್ಟ್ಯಾದಿಯಲ್ಲಿ ಹುಟ್ಟಿಸಿದ, ಶಾಶ್ವತವಾದ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರನ್ನು ಮನುಷ್ಯ ತಿಳಿದುಕೊಳ್ಳದೆ ಹೋಗುವುದಕ್ಕೆ, ಅವರ ಬೆಲೆಯನ್ನು ತಿಳಿದುಕೊಳ್ಳದೇ ಹೋಗುವುದಕ್ಕೆ ಮನುಷ್ಯನಲ್ಲಿರುವ ಅಜ್ಞಾನವೇ ಕಾರಣ.

ಭೂಮಿಮೇಲೆ ಕೆಲವರು ಮನುಷ್ಯರು ಸ್ವಲ್ಪ ಜ್ಞಾನವನ್ನು ತಿಳಿದುಕೊಂಡು ಆ ಸ್ವಲ್ಪ ಜ್ಞಾನದಿಂದಲೇ ದೇವರು ಇಂತಹವನೆಂದು ಹೇಳಿಕೊಳ್ಳುತ್ತಿದ್ದಾರೆ. ಒಂದೊಂದು ಮತದವರು ಒಂದೊಂದು ವಿಧವಾದ ಜ್ಞಾನವನ್ನು ಸ್ವಲ್ಪಮಟ್ಟಿಗೆ ತಿಳಿದುಕೊಂಡು, ದೇವರನ್ನು ಕುರಿತು ಮಾತಾಡುತ್ತಿರುತ್ತಾರೆ. ಯಾವ ಮತದಲ್ಲಾದರೂ ಸಂಪೂರ್ಣವಾದ ಜ್ಞಾನವನ್ನು ತಿಳಿಯದೆ, ದೇವರನ್ನು ಕುರಿತು ಮಾತಾಡಿದರೆ ಅದು ಅಸಂಪೂರ್ಣವಾಗಿಯೆ ಇರುವುದು. ಸ್ವಲ್ಪಮಾತ್ರ ಜ್ಞಾನವನ್ನು ತಿಳಿದವನಿಗೆ ದೇವರು ಎಂತಹವನೋ, ಆತನ ನಿಜ ಸ್ವರೂಪವೇನೋ, ಆತನ ವಿಧಾನವೇನೋ ಪೂರ್ತಿಯಾಗಿ ತಿಳಿಯುವುದಿಲ್ಲ. ತಮಗೆ ತಿಳಿದ ಸ್ವಲ್ಪ ಜ್ಞಾನದಿಂದ ದೇವರು, ದೇವರ ವಿಧಾನಗಳು (ಧರ್ಮಗಳು) ಸ್ವಲ್ಪ ಮಟ್ಟಿಗೆ ತಿಳಿಯುವುದೆಂದು ಬಹಳ ಜನಕ್ಕೆ ತಿಳಿಯದು. ಆದ್ದರಿಂದ ಪ್ರತಿ ಮನುಷ್ಯ ದೇವರನ್ನು ಕುರಿತು ತನಗೆ ತಿಳಿದಷ್ಟು, ಇತರರಿಗೆ ತಿಳಿದಿಲ್ಲವೆಂದುಕೊಳ್ಳುತ್ತಾನೆ ಹಾಗೆಯೇ ಪ್ರತಿ ಮತದವರು ತಮ್ಮ ಮತದಲ್ಲಿ ದೇವರನ್ನು ಕುರಿತು ತನಗೆ ತಿಳಿದಷ್ಟು ಇತರ ಮತದವರಿಗೆ ತಿಳಿದಿಲ್ಲವೆಂದುಕೊಳ್ಳುವುದು ನಡೆಯುತ್ತಿದೆ. ಇನ್ನೂ ನಮ್ಮ ಮತದಲ್ಲಿ ಹೇಳುವಂತಹ ದೇವರೇ ನಿಜವಾದ ದೇವರೆಂದು, ಇತರ ಮತದಲ್ಲಿ ಹೇಳುವಂತಹ ದೇವರು ನಿಜವಾದ ದೇವರಲ್ಲವೆಂದು ಎಂದುಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ಎಲ್ಲಾ ಮತದಲ್ಲಿನ ಪ್ರಜೆಗಳು ಅಂದುಕೊಳ್ಳುವುದರಿಂದ, ಅವರವರ ಭಾವಗಳಲ್ಲಿ ದೇವರು ಬೇರೆ ಬೇರೆ ವಿಧವಾಗಿ ಅರ್ಥವಾಗಿದ್ದಾನೆ. ಅದರಿಂದ ದೇವರು ತಮಗೆ ಹೇಗೆ ತಂದೆಯಾಗಿದ್ದಾನೆಂದು ಮನುಷ್ಯನಿಗೆ ಪೂರ್ತಿಯಾಗಿ ಅರ್ಥವಾಗದೆ ಹೋಗಿದೆ. ತಂದೆಯಾದ ದೇವರ ವಿಷಯವೇ ತಿಳಿಯದಿದ್ದಾಗ, ತಾಯಿಯಾದ ಪ್ರಕೃತಿ ವಿಷಯವು ಏನು ತಿಳಿಯದೆಂದೇ ಹೇಳಬಹುದು. **ದೇವರನ್ನು ಮತ್ತು ಭಗವಂತನನ್ನು ಕುರಿತು ಸಮಸ್ತ ಜ್ಞಾನವು ಮನುಷ್ಯನಿಗೆ ಎಲ್ಲಿಯವರೆಗೂ ತಿಳಿಯುವುದಿಲ್ಲವೊ ಅಲ್ಲಿಯವರೆಗೂ ಮನುಷ್ಯನಿಗೆ ನಿಜವಾದ ತಂದೆಯ ವಿಷಯವು ತಿಳಿಯದು. ಹಾಗೆ ಪ್ರಕೃತಿ ಮತ್ತು ಮಾಯೆಯನ್ನು ಕುರಿತು ಸಮಸ್ತ ಜ್ಞಾನವು ಮನುಷ್ಯನಿಗೆ ಎಲ್ಲಿಯವರೆಗೂ ತಿಳಿಯುವುದಿಲ್ಲವೋ ಅಲ್ಲಿಯವರೆಗೂ ತನಗೆ**

**ನಿಜವಾದ ತಾಯಿ ಯಾರೋ ತಿಳಿಯದು**. ಮುಖ್ಯವಾಗಿ ಹೇಳಿಕೊಂಡರೆ ಎಲ್ಲಾ ಮತಗಳಲ್ಲಿಯೂ ಎಲ್ಲಾ ಮೂಲ ಗ್ರಂಥಗಳಲ್ಲಿಯೂ ಪರಮಾತ್ಮ (ತಂದೆಯನ್ನು) ಕುರಿತು ಹೆಚ್ಚಿನದಾಗಿ, ಪ್ರಕೃತಿಯನ್ನು (ತಾಯಿಯನ್ನು) ಕುರಿತು ಕಡಿಮೆಯಾಗಿ ಹೇಳುವುದು ನಡೆದಿದೆ. ಹೆಚ್ಚಾಗಿ ಹೇಳಲ್ಪಟ್ಟ ಪರಮಾತ್ಮನನ್ನು ಕುರಿತೇ ಮನುಷ್ಯನಿಗೆ ಸರಿಯಾಗಿ ತಿಳಿಯದಿದ್ದಾಗ, ಕಡಿಮೆ ವಿವರವನ್ನು ಹೇಳಿರುವ ಪ್ರಕೃತಿಯನ್ನು ಕುರಿತು ಮನುಷ್ಯನಿಗೆ ಪೂರ್ತಿಯಾಗಿ ತಿಳಿಯದೆಂದೇ ಹೇಳಬಹುದು. ಮೊದಲು ತಾಯಿಯಾದ ಪ್ರಕೃತಿಯನ್ನು ಕುರಿತು ತಿಳಿಯದೆ, ತಂದೆಯಾದ ದೇವರನ್ನು ಕುರಿತು ಯಾರೂ ತಿಳಿಯಲಾರರು. ಏಕೆಂದರೆ! ಪ್ರಕೃತಿಯೇ ಮನುಷ್ಯನಲ್ಲಿ ಮಾಯೆಯಾಗಿ ಭದ್ರವಾದ ಸ್ಥಾನವನ್ನು ಏರ್ಪಡಿಸಿಕೊಂಡಿದೆ. ಮನುಷ್ಯನ ತಲೆಯಲ್ಲಿರುವ ಮಾಯೆ, ದೇವರನ್ನು ತಿಳಿದುಕೊಳ್ಳುವ ಪ್ರತಿಯೊಬ್ಬನಿಗೂ ಆತಂಕವಾಗಿ ದೈವಮಾರ್ಗದಿಂದ ಹೊರನೂಕುತ್ತದೆ. ಮಾಯೆಯನ್ನು ದಾಟಿಹೋಗಬೇಕೆಂದರೆ ಎಂತವರಿಗಾದರೂ ದುಸ್ಸಾಧ್ಯ. ದೇವರೇ ಆ ವಿಧವಾಗಿ ಮಾಯೆಗೆ ಬಲವನ್ನು ಕೊಟ್ಟು ಇಟ್ಟಿದ್ದಾನೆ. ಪ್ರತಿ ಮನುಷ್ಯನಲ್ಲಿಯೂ ಗುಣಗಳ ರೂಪದಲ್ಲಿ ಮಾಯೆ (ಸಾತಾನ್) ಅಥವಾ ಸೈತಾನ್ ಸ್ಥಾನವನ್ನು ಮಾಡಿಕೊಂಡಿದೆ. ಅಂತಹ ಮಾಯೆಯನ್ನು ಕುರಿತು ಭಗವಂತನು ಭಗವದ್ಗೀತೆಯಲ್ಲಿ ವಿಜ್ಞಾನಯೋಗ 14ನೇ ಶ್ಲೋಕದಲ್ಲಿ ಹೀಗೆ ತಿಳಿಸಿದ್ದಾನೆ.

***ಶ್ಲೋ:*** ***ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ,***
***ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿತೇ.***

**ಭಾವಾರ್ಥ :–** "ದೈವವಾದ ನನ್ನಿಂದ ಸೃಷ್ಟಿಸಲ್ಪಟ್ಟು ನನ್ನ ಮಾಯೆಯನ್ನು ಜಯಿಸಿ ದಾಟಿಹೋಗುವುದು ದುಸ್ಸಾಧ್ಯವು. ಆದರೆ ಯಾರಾದರೆ ನನ್ನನ್ನೇ ವಿಶ್ವಾಸಿಸುತ್ತಾನೋ, ಆರಾಧಿಸುತ್ತಾನೋ ಅವನು ಮಾತ್ರ ನನ್ನ ಮಾಯೆಯನ್ನು ಜಯಿಸಿ ದಾಟಿ ಹೋಗಬಲ್ಲನು" ಎಂದು ಹೇಳಿದ್ದಾನೆ. ಈ ಮಾತು ಭಗವಂತನು ಹೇಳಿದ ದೇವರ ಮಾತು. ಆದ್ದರಿಂದ ಕ್ರೈಸ್ತರು ಯೆಹೋವಾ ಹೇಳಿದ ಹಾಗೆ,

ಮುಸ್ಲಿಮ್‌ರು ಅಲ್ಲಾಹ್ ಹೇಳಿದ ಹಾಗೆ ಲೆಕ್ಕಿಸಿಕೊಳ್ಳಬೇಕಾದ ಅಗತ್ಯವಿದೆ. ದೇವರು ಸರ್ವಮಾನವರಿಗೂ ಹೇಳಿರುವುದಾದ್ದರಿಂದ ಎಲ್ಲರೂ ಮೇಲಿನ ವಾಕ್ಯವನ್ನು ಸ್ವೀಕರಿಸಬೇಕು. ಭೂಮಿ ಮೇಲೆ ಯಾವ ಮತಸ್ಥನೇ ಆಗಲಿ ಮನುಷ್ಯನೇ ಆಗಿರುವುದರಿಂದ ಆತನಿಗೆ ಗುಣಗಳಿವೆ. ಗುಣಗಳ ಸಮ್ಮೇಳನವೇ ಮಾಯೆಯಾಗಿದೆ. ಮಾಯೆಯನ್ನು ಜಯಿಸದೆ ಯಾರೂ ಅದನ್ನು ದಾಟಿ ದೇವರನ್ನು ಸೇರಲಾರನು. ಆದ್ದರಿಂದ ಮೊದಲು ಯಾವ ಮತಸ್ಥನೇ ಆದರೂ ಮಾಯೆಯನ್ನು ಕುರಿತು ತಿಳಿಯಬೇಕಾಗಿರುವ ಅಗತ್ಯವಿದೆ. ಮಾಯೆಯನ್ನು ಕುರಿತು ತಿಳಿಯದೆ, ಯಾವ ಮಾನವನೂ ದೇವರನ್ನು ಕುರಿತು ತಿಳಿಯಲಾರನು. ಮುಖ್ಯವಾಗಿ ಮಾಯೆ, ಮತವನ್ನು ಅಡ್ಡಇಟ್ಟು ಮನುಷ್ಯನನ್ನು ದೇವರ ಜ್ಞಾನದಲ್ಲಿ ಇದ್ದಹಾಗೆ ಮೋಸಗೊಳಿಸುತ್ತದೆ. **ಮನುಷ್ಯ ಮಾಯೆ ಕೈಯಲ್ಲಿ ಮೋಸ ಹೋಗದೆ ಇರಬೇಕೆಂದರೆ ಮತಾತೀತನಾಗಿರಬೇಕು. ಎಲ್ಲಾ ಮತಗಳು ತನ್ನವೇ ಎಂದುಕೊಳ್ಳಬೇಕು. ಎಲ್ಲಾ ಮತಗಳಲ್ಲಿ ಹೇಳಿರುವುದು ದೇವರು ಬೇರೆ ಬೇರೆ ಅಲ್ಲವೆಂದು ಎಲ್ಲರಿಗೂ ಒಬ್ಬನೇ ದೇವರೆನ್ನುವ ಭಾವನೆ ಬರಬೇಕು.** ಹಾಗೆ ಆಗುವವರೆಗೂ ನನ್ನ ಮತಬೇರೆ, ನಿನ್ನ ಮತಬೇರೆ ಎನ್ನುವ ಭಾವನೆ ಇರುವವರೆಗೂ, ಮನುಷ್ಯ ಮಾಯೆ ಕೈಯಲ್ಲಿಯೆ ಇರುವನು. ತಾನು ಆಧ್ಯಾತ್ಮಿಕದಲ್ಲಿ ದೊಡ್ಡವನೆಂದು ಹಿಂದುವನ್ನು (ಇಂದೂವನ್ನು), ನಾನು ನಿಜವಾದ ವಿಶ್ವಾಸಿಯೆಂದು ಮುಸ್ಲಿಮ್‌ನನ್ನೂ, ನಾನು ನಿಜವಾದ ಯೆಹೋವಾ ಭಕ್ತನೆಂದು ಕ್ರೈಸ್ತವನನ್ನೂ ಎಂದುಕೊಳ್ಳುವಹಾಗೆ ಮಾಡಿ ಎಲ್ಲರನ್ನು ಮಾಯೆ ಭ್ರಮೆಪಡುವಂತೆ ಮಾಡುತ್ತದೆ. ಅಂತಹವರಿಗೆ ಯಾರಿಗೂ ತನ್ನ ಮತದೊಳಗಿನ ಜ್ಞಾನವನ್ನಾಗಲಿ, ಇತರ ಮತಗಳಲ್ಲಿನ ಜ್ಞಾನವಾಗಲಿ ತಿಳಿಯದಂತೆ ಮಾಡುತ್ತದೆ. ತನ್ನ ಮತದೊಳಗಿನ ಜ್ಞಾನವು ತನಗೆ ಅರ್ಥವಾಗಿದೆಯೆಂದು ನಂಬಿಸುತ್ತದೆ. ಆದ್ದರಿಂದ ಮೊದಲು ನಿನ್ನ ತಾಯಿಯನ್ನು, ನಂತರ ನಿನ್ನ ತಂದೆಯನ್ನು ತಿಳಿಯಬೇಕು. **ತಾಯಿಯನ್ನು (ಮಾಯೆಯನ್ನು) ತಿಳಿಯದೇ ಯಾರಾದರೂ ತಂದೆಯನ್ನು (ದೇವರನ್ನು) ತಿಳಿಯುವ ಪ್ರಸಕ್ತಿಯೇ ಇಲ್ಲ. ಈ ರಹಸ್ಯವನ್ನು ತಿಳಿಯದೆ ಎಲ್ಲಾ ಮತದೊಳಗಿನವರು ತಾವು ಜ್ಞಾನಿಗಳೆಂದು ಅಂದುಕೊಳ್ಳುವುದು ನಡೆಯುತ್ತಿದೆ.**

ಇಲ್ಲಿ ಬಹಳ ಜನಕ್ಕೆ ನನ್ನನ್ನು ಒಂದು ಪ್ರಶ್ನೆ ಕೇಳುವ ಅವಕಾಶವಿದೆ. ಅದೇನೆಂದರೆ! ನೀವು ನಿಮ್ಮ ರಚನೆಗಳಲ್ಲಿ ಬಹಳ ಕಡೆ ***"ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ"*** ಮೂರು ಗುಣ ವಿಷಯಗಳೇ ವೇದಗಳು ಅವುಗಳನ್ನು ವಿಸರ್ಜಿಸು, ವೇದಗಳನ್ನು ಬಿಟ್ಟುಹಾಕುವುದರಿಂದ ಗುಣ ವಿಷಯಗಳಿಂದ ಕೂಡಿಕೊಂಡಿರುವ ಮಾಯೆಯಿಂದ ಹೊರ ಬೀಳಬಹುದು ಎಂದು ಭಗವದ್ಗೀತೆ ಸಾಂಖ್ಯ ಯೋಗದಲ್ಲಿ 45ನೇ ಶ್ಲೋಕದಲ್ಲಿ ಬರೆದಹಾಗೆ ಹೇಳಿದ್ದೀರ. ಅಷ್ಟೇ ಅಲ್ಲದೆ ವಿಜ್ಞಾನ ಯೋಗ 13, 14 ಶ್ಲೋಕಗಳಲ್ಲಿ...

**13** ***ತ್ರಿಭಿರ್ಗುಣಮಯೈ ರ್ಭಾವೈ ರೇಭಿ ಸ್ಸರ್ವಮಿದಮ್ ಜಗತ್ ।***
***ಮೊಹಿತಂ ನಾಭಿಜಾನಾತಿ ಮಾಮೇಭ್ಯಃ ಪರ ಮವ್ಯಯಮ್ ॥***

***14*** ***ದೈವೀಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।***
***ಮಾಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿತೇ ॥***

"ಸರ್ವ ಜಗತ್ತೆಲ್ಲವೂ ಸಾತ್ವಿಕ, ರಾಜಸ, ತಾಮಸ ಗುಣಗಳಿಂದ ಕೂಡಿಕೊಂಡಿರುವುದರಿಂದ ಆ ಗುಣ ಪ್ರಭಾವಗಳಿಂದ ಸಮ್ಮೋಹನ ಹೊಂದಿ (ಹಿಪ್ನಟೈಜ್ ಮಾಡಿ) ನಾಶನವಿಲ್ಲದ ನನ್ನನ್ನೂ, ನನ್ನೊಂದರ ಪರಂಭಾವವನ್ನು ಕುರಿತು ಏನೂ ತಿಳಿಯದೆ ಇದ್ದಾರೆ."

"ನನ್ನಿಂದ ತಯಾರು ಮಾಡಿದ ಗುಣಗಳಿಂದ ಕೂಡಿಕೊಂಡಿರುವ ಮಾಯೆಯನ್ನು ದಾಟುವುದು ದುಸ್ಸಾಧ್ಯವಾದ ಕೆಲಸ. ಯಾರಾದರೆ ನನ್ನ ಜ್ಞಾನವನ್ನು ತಿಳಿದು ನನ್ನನ್ನೇ ಆರಾಧಿಸುತ್ತಾನೋ, ಅವನೇ ಮಾಯೆಯನ್ನು ಸುಲಭವಾಗಿ ದಾಟಿಹೋಗಬಲ್ಲನು." ಆದ್ದರಿಂದ ಮೂರು ಗುಣಗಳು ಮಾಯೆಯೆಂದು, ಮೂರುಗುಣಗಳ ವಿಷಯಗಳಿಂದ ಕೂಡಿಕೊಂಡ ವೇದಗಳು ಮಾಯೆಗೆ ಪ್ರತಿರೂಪಗಳೆಂದು, ಮಾಯೆಯನ್ನು ಜಯಿಸುವುದಕ್ಕೆ ವೇದಗಳನ್ನು ಬಿಟ್ಟು ಹಾಕಬೇಕೆಂದು ಹೇಳಿದ್ದೀರ ಅಲ್ಲವೆ! ಈಗೇನೋ ಮಾಯೆಯನ್ನು ತಿಳಿಯದೇ ದೇವರನ್ನು ತಿಳಿಯಲಾರರು ಎಂದು ಅನ್ನುತ್ತೀಯ. ಆಗೇನೋ

ದೇವರನ್ನು ನಂಬಿದವನು ಮಾಯೆಯನ್ನು ಜಯಿಸಬಲ್ಲನು ಎಂದು ಹೇಳಿದ್ದೀರ. ಈಗ ಮೊದಲು ಮಾಯೆಯನ್ನು ತಿಳಿದುಕೊ ನಂತರ ದೇವರು ತಿಳಿಯುತ್ತಾನೆ ಎಂದು ಹೇಳುತ್ತಿದ್ದೀಯ. ಇದೆಲ್ಲವೂ ನೋಡಿದರೆ ನೀವು ದ್ವಂದ್ವವಾಗಿ ಮಾತಾಡಿದ ಹಾಗೆ ತಿಳಿಯುತ್ತಿದೆ. ಹೀಗೆ ಎರಡು ವಿಧವಾಗಿ ಮಾತಾಡಿದರೆ, ನಾವು ಯಾವುದು ನಂಬಬೇಕು? ಅಂತರಂಗದೊಳಗಿನ ಮಾಯೆಯನ್ನು ಜಯಿಸಬೇಕೆಂದರೆ, ಬಾಹ್ಯದೊಳಗಿನ ವೇದಗಳನ್ನು ಬಿಡಬೇಕೆಂದಿದ್ದಾರೆ. ಆದರೆ ಈಗ ನೀವು ಹೇಳುವ ಜ್ಞಾನವು ಸಹ ವೇದವಲ್ಲವೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗಿದೆ.

ತಂದೆಯನ್ನು ಕುರಿತು ಹೇಳುವುದು ತಾಯಿಯೆ ಎಂದು, ಹಾಗೆ ದೇವರನ್ನು ಕುರಿತು ಹೇಳುವುದು ಪ್ರಕೃತಿಯೆ ಎಂದು (ಮಾಯೆ ಎಂದು) ಹೇಳಿದ್ದೇನಲ್ಲವೆ! ಆದ್ದರಿಂದ ದೇವರು ಮಾಯೆ ಮುಖಾಂತರ (ವೇದದ ಮುಖಾಂತರ) ತಿಳಿಯುವನೆಂದು ಈಗಲೂ ಸಹ ಹೇಳುತ್ತಿದ್ದೇನೆ. ಇಲ್ಲಿ ನೀವು ಚೆನ್ನಾಗಿ ಗಮನಿಸಿದರೆ, ನಾವು ಹೇಳಿರುವುದರಲ್ಲಿ ಯಾವ ತಪ್ಪಿಲ್ಲವೆಂದು, ನಾವು ಎರಡು ವಿಧವಾಗಿ ಮಾತನಾಡಿಲ್ಲವೆಂದು ನಿಮಗೆ ತಿಳಿಯುವುದು. ಈಗ ಚೆನ್ನಾಗಿ ಕೇಳಿರಿ, ಮಾಯೆ ದೈವಮಾರ್ಗದಲ್ಲಿ ಕಳುಹಿಸಬಹುದು, ಹಾಗೆ ಮಾಯೆ ದೇವರ ಮಾರ್ಗದಿಂದ ತಪ್ಪಿಸಲೂ ಬಹುದು. ಮಾಯೆ ಎರಡು ವಿಧಗಳ ಸಾಮರ್ಥ್ಯವನ್ನು ಹೊಂದಿದೆ. ಮಾಯೆ ಎಂದುಕೊಂಡರೆ, ಎಂತಹ ತಿಳುವಳಿಕೆ ಇರುವವನನ್ನೂ ಸಹ ಅಜ್ಞಾನಿಯಾಗಿ ಬದಲಾಯಿಸುತ್ತದೆ. ಹಾಗೆ ಮಾಯೆ ಅಂದುಕೊಂಡರೆ, ಎಷ್ಟು ತಿಳುವಳಿಕೆ ಇಲ್ಲದವನನ್ನು ಸಹ ದೊಡ್ಡ ಜ್ಞಾನಿಯಾಗಿ ಮಾಡುತ್ತದೆ. ಇದರಿಂದ **ವೇದ** ಎನ್ನುವ ಮಾಯೆ ಎರಡು ವಿಧಗಳಾಗಿ ಇದೆಯೆಂದು ತಿಳಿಯುತ್ತಿದೆ. ಒಂದು ವಿಧದ ಮಾಯೆ ದೇವರಿಗೆ ವಿರುದ್ಧವಾದದ್ದೆಂದು, ಮತ್ತೊಂದು ವಿಧದ ಮಾಯೆ ದೇವರಿಗೆ ಅನುಕೂಲವಾದದ್ದೆಂದು ತಿಳಿಯುತ್ತಿದೆ. ದೇವರಿಗೆ ವಿರುದ್ದವಾದ ಮಾಯೆ

ದೇವರಕಡೆ ಯಾರನ್ನೂ ಹೋಗಲು ಬಿಡುವುದಿಲ್ಲ. ದೇವರಿಗೆ ಅನುಕೂಲವಾದ ಮಾಯೆ, ದೇವರಕಡೆ ಹೋಗುವವನನ್ನು ಆತಂಕ ಪಡಿಸದೆ, ಅವನ ದಾರಿಯನ್ನು ಸುಗಮವಾಗಿ ಮಾಡುತ್ತದೆ. ಹೀಗೆ ದೇವರಿಂದ ತಯಾರಾದ ಮಾಯೆ ಎರಡು ವಿಧವಾಗಿ ಕೆಲಸ ಮಾಡುತ್ತದೆ. ಒಂದೇ ಮಾಯೆ ಎರಡು ವಿಧಗಳಾಗಿ ಪ್ರಭಾವವನ್ನು ತೋರಿಸುತ್ತದೆ. ಆದ್ದರಿಂದ ಮಾಯೆಯನ್ನು ಎರಡು ವಿಧಗಳಾಗಿ ಹೇಳಿದ್ದೇವೆ. ಹಾಗೆ ಮಾಯೆ ಸ್ವರೂಪವಾದ ವೇದಗಳನ್ನು ಸಹ ಎರಡು ವಿಧಗಳಾಗಿ ಹೇಳಬಹುದು. ವೇದಗಳು ದೈವತ್ವವನ್ನು ತಿಳಿಸುವಂತೆ ನಂಬಿಸಿ, ದೇವರನ್ನು ಸೇರದಹಾಗೆ ದೇವರಿಗೆ ವಿರುದ್ಧ ಮಾರ್ಗದಲ್ಲಿ ಮನುಷ್ಯರನ್ನು ಕಳುಹಿಸಬಲ್ಲದು. ಹಾಗೆ ವೇದವೇ ದೇವರನ್ನು ಸೇರುವಹಾಗೆ ದೇವರಿಗೆ ಅನುಕೂಲ ಮಾರ್ಗದಲ್ಲಿ ಸಹ ಕಳುಹಿಸಬಲ್ಲದು.

ಇಷ್ಟಕ್ಕೂ ದೇವರಿಗೆ ವಿರುದ್ಧವಾದ ಮಾರ್ಗದಲ್ಲಿ ಕಳುಹಿಸುವ ವೇದಗಳು ಯಾವುವು? ಹಾಗೆ ದೇವರಿಗೆ ಅನುಕೂಲವಾದ ಮಾರ್ಗದಲ್ಲಿ ಪ್ರಯಾಣಿಸುವಂತೆ ಮಾಡುವ ವೇದಗಳು ಯಾವುವು? ಎಂದು ಕೇಳಿದರೆ ಅವು ಹೀಗಿವೆ. ಇಂದೂ (ಹಿಂದೂ) ಮತದಲ್ಲಿ ಕೆಲವರಿಗೆ ಮಾತ್ರ ವೇದಗಳು ತಿಳಿದಿವೆ. ಇಂದಿನ ಸಮಾಜದಲ್ಲಿ ಎಲ್ಲರಿಗೂ ವೇದಗಳ ಕುರಿತು ತಿಳಿಯದೆ ಹೋಗಿದೆ. ಇನ್ನೂ ಹೇಳಬೇಕೆಂದರೆ ತನ್ನದು ಯಾವ ಮತವೂ ಸಹ ತಿಳಿಯದ ಸ್ಥಿತಿಯಲ್ಲಿ ಹಿಂದುವು ಇದ್ದಾನೆ. ಆದ್ದರಿಂದ ಕೆಲವರಿಗೆ ಮಾತ್ರವೆ ವೇದಗಳು ನಾಲ್ಕು ಎಂದು, ಅವು 1) ಸಾಮವೇದ 2) ಯಜುರ್ವೇದ 3) ಅಥರ್ವಣವೇದ 4) ಋಗ್ವೇದ ಎಂದು ತಿಳಿದಿದೆ. ಈ ನಾಲ್ಕು ವೇದಗಳನ್ನು ವ್ಯಾಸ ಮಹರ್ಷಿ ಬರೆದಿರುವುದು ನಡೆದಿದೆ. ವ್ಯಾಸನು ನಾಲ್ಕು ವೇದಗಳೇ ಅಲ್ಲದೆ 18 ಪುರಾಣಗಳನ್ನು ಸಹ ಬರೆದಿದ್ದಾನೆ. ವೇದಗಳು ನಾಲ್ಕು ದೇವರಿಗೆ ವಿರುದ್ದ ಮಾರ್ಗದಲ್ಲಿ ಮನುಷ್ಯನನ್ನು ಕಳುಹಿಸುವವೆಂದೇ ತಿಳಿಯಬೇಕು. ನಾಲ್ಕು ವೇದಗಳು ತಯಾರಾಗಿ ಪ್ರಜೆಗಳೊಳಗೆ ಹೋದ ನಂತರ ಅಲ್ಲಿಯವರೆಗಿದ್ದ ಸ್ವಲ್ಪ ಮಟ್ಟಿನ ಧರ್ಮಗಳು ಸಹ ಇಲ್ಲದೆ ಹೋಗಿವೆ. ಆದ್ದರಿಂದ ಆಗಲೇ ಧರ್ಮಗಳನ್ನು ಪುನಃ ತಿಳಿಸುವುದಕ್ಕೆ ಭಗವಂತನು

ಹುಟ್ಟಿದ್ದಾನೆ. ಅಧರ್ಮಗಳು ಅಭಿವೃದ್ಧಿ ಯಾಗಲು ನಾಲ್ಕು ವೇದಗಳು ಮೂರು ಗುಣಗಳ ಮಿಳಿತವಾದ ಮಾಯೆಯಾಗಿ ಮನುಷ್ಯರನ್ನು ಪ್ರೇರೇಪಿಸಿದೆ. ಆಗಲೇ ಭೂಮಿಮೇಲೆ ಧರ್ಮ ಸಂಸ್ಥಾಪನೆ ನಿಮಿತ್ತವಾಗಿ ಮೊದಲ ಅವತಾರವಾಗಿ ಭಗವಂತನಾದ ಕೃಷ್ಣನು ಹುಟ್ಟಿದ್ದಾನೆ. ಒಂದುಬಾರಿ ಧರ್ಮಗಳು ಸಂಪೂರ್ಣವಾಗಿ ಸ್ಥಾಪಿಸುವುದಕ್ಕೆ ದೇವರ ಅಂಶ ಮೂರುಬಾರಿ ಹುಟ್ಟಬೇಕಾದ ಅಗತ್ಯವಿದೆ. ಅದರ ಪ್ರಕಾರ ಗಮನಿಸಿದರೆ  ಒಂದು ಭಾರಿ ಭಗವಂತನ ಬರುವಿಕೆ ದ್ವಾಪರಯುಗದ  ಕೊನೆಯಲ್ಲಿ ನಡೆದಿದೆ. ನಂತರ ಎರಡನೆ ಬಾರಿ ಪ್ರವಕ್ತ ಬರುವಿಕೆ  ಸಹ ಮುಗಿದುಹೋಗಿದೆ.  ಇನ್ನು ಮೂರನೇ  ಬರುವಿಕೆ ಆದರಣಕರ್ತನಾಗಿ ಬರುವುದಿದೆ. ಅದು ಹಾಗೆ ಇರುವಾಗ ಮಾಯೆಯ ರೂಪಗಳಾದ ನಾಲ್ಕು ವೇದಗಳು ದೇವರಿಗೆ ವಿರುದ್ಧ ಮಾರ್ಗವನ್ನು ತೋರಿಸಿದರೆ, ದೇವರಿಗೆ ಅನುಕೂಲ ಮಾರ್ಗವನ್ನು ತೋರಿಸುವ ಐದನೆ ವೇದವು ಸಹ ಒಂದಿದೆ. ಅದನ್ನೆ **"ಪಂಚಮವೇದ"** ಎಂದು ಅನ್ನುತ್ತಾರೆ. ಕೆಲವರು ಮಹಾಭಾರತ ಪಂಚಮವೇದವೆಂದು, ಕೆಲವರು ಭಾಗವತ ಪಂಚಮವೇದವೆಂದು ಅನ್ನುವುದು ನಡೆಯುತ್ತಿದೆ. ವಾಸ್ತವವಾಗಿ ಆ ಎರಡು ಸಹ ಪಂಚಮ ವೇದವಲ್ಲ. ಭಾರತ ಚರಿತ್ರೆ ಆದಾಗ, ಭಾಗವತ ಪುರಾಣವೆಂದು ತಿಳಿಯಬೇಕು.

ನಾಲ್ಕು ನೂರು ವರ್ಷಗಳ ಹಿಂದೆ ಪೋತುಲೂರಿ ವೀರ ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಪಂಚಮ ವೇದವಾದ ಸಾಂಧ್ರ ಸಿಂಧೂ ವೇದವನ್ನು ಕುರಿತು ಹೇಳಿದ್ದಾನೆ. **"ಸಾಂದ್ರ ಸಿಂಧೂ ವೇದಕ್ಕೆ ಕರ್ತ ಆನಂದ ಗುರುವು. ಸಾಂದ್ರ ಸಿಂಧೂ ವೇದವು ಭೂಮಿಮೇಲೆ ಇಲ್ಲ. ಅದನ್ನು ಸಮಗ್ರವಾಗಿ ಹೇಳುವವನು ಆನಂದ ಗುರುವು"** ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ **"ಸಾಂದ್ರ ಸಿಂಧೂ ವೇದ ಮಾರ್ಗವು ಹೇಳಿದಂತೆ ಸಕಲವಾದವರು (ಎಲ್ಲಾ ಮತದವರು) ನಡೆವರಯ್ಯಾ"** ಎಂದು ಸಹ ಹೇಳಿದ್ದಾನೆ. ನೀವು ನನ್ನನ್ನು ಪ್ರಶ್ನಿಸಿದ ಪ್ರಶ್ನೆಯಲ್ಲಿ ನೀವು ಹೇಳುವುದು ವೇದವಲ್ಲವೆ? ಎಂದು ಪ್ರಶ್ನಿಸಿದ್ದೀರ. ಅದಕ್ಕೆ ಸರಿಯಾದ ಉತ್ತರವಾಗಿ ನಾವು ಹೇಳುವುದು ಸಹ ವೇದವೇ. ಕಾಲಜ್ಞಾನದಲ್ಲಿ ಬ್ರಹ್ಮಯ್ಯನವರು

ಹೇಳಿದ ಸಾಂದ್ರ ಸಿಂಧೂ ವೇದವನ್ನೇ ನಾವು ಹೇಳುತ್ತಿದ್ದೇವೆ. ನನ್ನ ಮುಖಾಂತರ ಹೇಳುವುದು ದೈವಮಾರ್ಗವೆಂದು ತಿಳಿದಿದೆ. ಆದರೆ ಸಾಂಧ್ರ ಸಿಂದೂ ವೇದವೆಂದು ನನಗೂ ಸಹ ತಿಳಿಯದು. ಆ ವಿಷಯವನ್ನು ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಕೆಲವು ಕಡೆ ಬರೆದಿರುವುದರಿಂದ ಆ ವಿಷಯವು ನಮಗೂ ಈಗಲೆ ತಿಳಿದಿದೆ. ಹೊರ ಪ್ರಪಂಚದಲ್ಲಿ ನನ್ನನ್ನು ನಾನು ಹೆಚ್ಚಿಸಿಕೊಳ್ಳದೆ ತಗ್ಗಿಸುಕೊಳ್ಳುವವನು. ನಾನು ಹೊರ ಪ್ರಪಂಚಕ್ಕೆ ತಿಳಿಯದ ಹಾಗೆ ಇರಬೇಕೆಂದುಕೊಳ್ಳುವವನು. ಆದರೆ ವೀರ ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ **"ಪ್ರಬೋಧಾಶ್ರಮವು ಉನ್ನತವಾದ ಜ್ಞಾನವು ಇರುವಂತಹದ್ದು"** ಎಂದು ಬರೆದಿರುವುದರಿಂದ ನಾನು ಸ್ವಲ್ಪ ಹೊರಗಡೆ ತಿಳಿದುಬಂದಿರುವುದು ನಡೆದಿದೆ. ಅಷ್ಟೇ ಅಲ್ಲದೆ **"ಪ್ರಬೋಧಾಶ್ರಮದವರು ಶಯನಾಧಿಪತಿ ಗುಣಗಳು ಇರುವವರೆಂದು, ಶಯನಾಧಿಪತಿಯೇ ಆನಂದಗುರುವೆಂದು, ಸಿದ್ಧಾಂತ ಶಿರೋಮಣಿ ಆದ ಗುರುಸ್ವಾಮಿ ಸಿದ್ಧಾಂತವು ಮುಖ್ಯವಾಯಿತಯ್ಯಾ"** ಎಂದು ಬರೆದಿರುವುದರಿಂದ, ಇನ್ನೂ ನಮ್ಮನ್ನು ಬಹಿರ್ಗತಮಾಡುತ್ತಾ ಬರೆದಿರುವ ಕೆಲವು ವಾಕ್ಯಗಳಿಂದ ನಾವು ಜ್ಞಾನವು ಹೇಳುವ ಗುರುವೆಂದು ಹೊರಬೀಳಬೇಕಾಗಿ ಬಂದಿದೆ. ವಾಸ್ತವವಾಗಿ ನಾವು ಹೇಳುವ ವಿಷಯಗಳನ್ನು ಎಲ್ಲಾ ಮತದವರು ಇಷ್ಟಪಡುತ್ತಿರುವುದು, ನಾವು ಹೇಳಿರುವುದು **ತ್ರೈತ ಸಿದ್ಧಾಂತ** ಆಗಿರುವುದರಿಂದ, ನಾಲ್ಕು ನೂರು ವರ್ಷಗಳ ಪೂರ್ವದಲ್ಲಿ ಬರೆದಿರುವ ಕಾಲಜ್ಞಾನಕ್ಕೆ ಪೂರ್ತಿಯಾಗಿ ಸರಿಹೋಗಿದೆ. ನಮ್ಮ ರಚನೆಗಳೆಲ್ಲ ಹೊಸದಾಗಿರುವುದರಿಂದ, ಇಲ್ಲಿಯವರೆಗು ಯಾರಿಗೂ ತಿಳಿಯದ ಹೊಸ ಜ್ಞಾನ ವಿಷಯಗಳಾದ್ದರಿಂದ, ನಾವು ಹೇಳುವುದು **ಸಾಂದ್ರ ಸಿಂಧೂ ವೇದವೇ ಎಂದು** ಒಪ್ಪಿಕೊಳ್ಳದೆ ತಪ್ಪುವುದಿಲ್ಲ.

ಬ್ರಹ್ಮಯ್ಯನವರು **"ಸಿದ್ಧಾಂತ ಶಿರೋಮಣಿಯಾದ ಗುರುಸ್ವಾಮಿ ಸಿದ್ಧಾಂತವು ಮುಖ್ಯವಾಗುವುದಯ್ಯಾ"** ಎಂದು ಹೇಳಿದಹಾಗೆ ಮತ್ತು **"ಸಾಂದ್ರ ಸಿಂಧೂ ವೇದಮಾರ್ಗವು ಹೇಳಿದಂತೆ ಸಕಲವಾದವರೆಲ್ಲರೂ ನಡೆವರಯ್ಯಾ"** ಎಂದು ಹೇಳಿದ ಹಾಗೆ ನಮಗೆ ಈಗೀಗ ತಿಳಿದಿದೆ. ಆದರೆ ಇದಕ್ಕು ಮೊದಲೆ

ಇದೇ ವಿಷಯವನ್ನೇ ನಾವು ಹೇಳುವ ಜ್ಞಾನವನ್ನು ಎಲ್ಲ ಮತದವರು ಅನುಸರಿಸುತ್ತಾರೆಂದು, ಮೂರು ಮತದವರು ಏಕವಾಗಿ **ತ್ರೈತ ಸಿದ್ಧಾಂತ ಜ್ಞಾನವನ್ನು** ದೊಡ್ಡದಾಗಿ ಹೇಳಿಕೊಳ್ಳುತ್ತಾರೆಂದು ಬಹಳ ಬಾರಿ ಹೇಳಿದ್ದೇವೆ. ನಾವು ಹೇಳಿದಹಾಗೆ ನಡೆಯುತ್ತಿರುವುದು ತಿಳಿದ ಸತ್ಯವೆ. ಆದ್ದರಿಂದ ಬ್ರಹ್ಮಯ್ಯನವರು ನಮ್ಮನ್ನು ಕುರಿತು ಬರೆದ ಬರವಣಿಗೆಯನ್ನು ಅಲ್ಲವೆನ್ನದೆ ಹೋಗುತ್ತಿದ್ದೇವೆ. ನಾವು ಹೇಳುತ್ತಿರುವುದು ಯಾರಿಗೂ ತಿಳಿಯದ ಸಾಂಧ್ರ ಸಿಂಧೂ ವೇದವೆಂದು ಒಪ್ಪಿಕೊಳ್ಳುತ್ತಿದ್ದೇವೆ. ಇಲ್ಲಿಗೆ ಸುಮಾರು ಮೂರು ನೂರ ಐವತ್ತು ವರ್ಷಗಳ ಕೆಳಗೆ ಜೀವಸಮಾಧಿ ಆದ ಬ್ರಹ್ಮಯ್ಯನವರು, ತನ್ನ ಸಮಾಧಿಯಿಂದ ಹೊರಬಂದು  ಜನ್ಮ ತೆಗೆದುಕೊಂಡು ಮೂವತ್ತು ವರ್ಷಗಳಾಗುತ್ತಿದೆ. ಆತನ ವಯಸ್ಸು ಇಲ್ಲಿಗೆ ಮೂವತ್ತು ವರ್ಷಗಳು. ಆತನು ಇನ್ನು ಸ್ವಲ್ಪ ಕಾಲಕ್ಕೆ ನಮ್ಮ ಬಳಿಗೆ ಬರುತ್ತೇನೆಂದು, ಆನಂದ ಗುರುವೇ ನನ್ನ ಗುರುವೆಂದು ತನ್ನ ಕಾಲಜ್ಞಾನದಲ್ಲಿ ಹೇಳಿದ್ದಾರೆ. ಆತನು ಬಂದಾಗಲೆ ನಾನ್ಯಾರೆಂದು ಬಹಿರ್ಗತ ಮಾಡುವನು. ಆಗಲಾದರೂ ನನ್ನ ಬಗ್ಗೆ ಮತ್ತೆ ನನ್ನ ಆತ್ಮದ ವಿಷಯವೂ ಹೊರಬೀಳುವುದು. ಆದ್ದರಿಂದ ನೀವು ಕೇಳಿದ ಪ್ರಶ್ನೆಗೆ ಉತ್ತರವಾಗಿ ನಾವು ಹೇಳಿರುವುದೂ ಸಹ ವೇದವೆಂದೇ, ನನ್ನಿಂದ ಹೇಳಲಾಗಿರುವ ವೇದವು ದೇವರ ಜ್ಞಾನವನ್ನು ಸುಗಮವಾಗಿ ಮಾಡಿ, ಮನುಷ್ಯನನ್ನು ಮೋಕ್ಷಕ್ಕೆ (ದೈವ ಸನ್ನಿಧಿಗೆ) ಕಳುಹಿಸುವುದೆಂದು ಹೇಳುತ್ತಿದ್ದೇನೆ.

ನಾವು ಇಲ್ಲಿಯುವರೆಗೂ ತಿಳಿಸಿದ ಜ್ಞಾನವು ಪೂರ್ತಿ ದೈವ ಸಂಬಂಧವಾದದ್ದಾಗಿದೆ. ಎಲ್ಲಾ ಮತಗಳಿಗೂ ಆಮೋದಯೋಗ್ಯವಾಗಿದೆ. ಎಲ್ಲ ಮತ ಗ್ರಂಥಗಳಲ್ಲಿಯೂ ನಾವು ಹೇಳಿರುವ ಜ್ಞಾನವಿದೆ. ಆದ್ದರಿಂದ ಎಲ್ಲ ಮತದವರು ನಮ್ಮ ಜ್ಞಾನವನ್ನು ಒಪ್ಪಿಕೊಳ್ಳಬೇಕಾಗಿ ಬರುತ್ತದೆ. ಕೆಲವರು ಅಸೂಯೆಯಿಂದಲೋ ಅಜ್ಞಾನದಿಂದಲೋ ನಾವು ಹೇಳಿರುವ ಜ್ಞಾನವನ್ನು ಅಲ್ಲ ಎಂದರೂ, ಅದೇ ಮತದವರು ಎಷ್ಟೋ ಜನ ನಮ್ಮ ಜ್ಞಾನವನ್ನು ದೊಡ್ಡದೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಈಗಲೂ ಸಹ **“ತಾಯಿ**

**ತಂದೆ"** ಎನ್ನುವ ಈ ಚಿಕ್ಕ ಗ್ರಂಥದೊಳಗಿನ ವಿಷಯಗಳನ್ನು ಯಾರು ಖಂಡಿಸುವುದಿಲ್ಲ. ಏಕೆಂದರೆ **ಸಿದ್ಧಾಂತದಿಂದ ಕೂಡಿಕೊಂಡಿರುವ ಜ್ಞಾನವು ಖಂಡಿಸಲಾಗುವುದಿಲ್ಲ.** ತಾಯಿಯ ಸಮಾಚಾರವು ಸೋದರ ಮಾವನಿಗೆ ತಿಳಿಯದಾ! ಎನ್ನುವಂತೆ ಮಾಯೆಯ ಸಮಾಚಾರವು ಯೋಗಿಯಾದವನಿಗೆ ತಪ್ಪದೆ ತಿಳಿಯುವುದು. ಆದ್ದರಿಂದ ಎಲ್ಲರಿಗೂ ತಾಯಿ ತಂದೆಯಾರೆಂದು ಸಿದ್ಧಾಂತ ಕರ್ತನಾದ ನಾನು ಹೇಳದೆ ತಪ್ಪುವುದಿಲ್ಲ. ಅದೇ ವಿಷಯವನ್ನೇ ನಿನ್ನ ತಂದೆ ಯಾರೋ, ನಿನ್ನ ತಾಯಿ ಯಾರೋ ತಿಳಿಯಬೇಕೆಂದು ಹೇಳುತ್ತಿದ್ದೇನೆ. ತಾಯಿ ಕಡೆಯಿಂದ ತಂದೆ ಕಡೆಗೆ ಹೋಗುವಹಾಗೆ, ವೇದವಲ್ಲದ ವೇದವಾದ ಸಾಂದ್ರ ಸಿಂಧೂ ವೇದವನ್ನು ತಿಳಿದು ಅಸಲಾದ ತಾಯಿ ತಂದೆಯರನ್ನು ಕಂಡು ಕೊಳ್ಳಬೇಕೆಂದು ನನ್ನ ಕಡೆಯಿಂದ ಹೇಳುತ್ತಿದ್ದೇನೆ. ಇಲ್ಲಿ ಕೆಲವರು ನಿಮ್ಮ ದೊಡ್ಡತನವನ್ನು ಕುರಿತು ನೀವು ಹೇಳಿಕೊಳ್ಳುತ್ತಿದ್ದೀರಾ ಎಂದು ಕೇಳಿದರೂ ಕೇಳಬಹುದು. ಅದಕ್ಕೆ ಉತ್ತರ ನಾನು ಯಾರೋ ನನಗೇ ತಿಳಿಯದಿದ್ದಾಗ ನನ್ನ ದೊಡ್ಡತನವನ್ನು ಕುರಿತು ನಾನೇಗೆ ಹೇಳಬಲ್ಲೆನು. ನನ್ನನ್ನು ಕುರಿತು ನಾನು ಹೇಳಲಿಲ್ಲ ಆದರೆ, ನನ್ನನ್ನು ಕುರಿತು ಇತರರು ಹೇಳಿದ್ದನ್ನು ಹೇಳಿದ್ದೇನೆ.  ನನ್ನನ್ನು ಕುರಿತು ಹೇಳಿದ ಪೋತುಲೂರಿ ವೀರ ಬ್ರಹ್ಮಯ್ಯನವರು ಲೋಕದಲ್ಲಿ ನಡೆಯುವ ಕೆಲವು ನೂರು ವರ್ಷಗಳ ಭವಿಷ್ಯತ್ತನ್ನು ಮುಂಚೆಯೇ ಹೇಳಿದ ದೊಡ್ಡ ವ್ಯಕ್ತಿ. ಆದ್ದರಿಂದ ಆತನು ಹೇಳಿದ ವಿಷಯವನ್ನೇ ಸಂದರ್ಭ ಬಂದಿದೆಯಾದ್ದರಿಂದ ಹೇಳಿದ್ದೇನೆ. ನಾವು ಹೇಳಿರುವುದು ಅರ್ಥವಾಗದೆ ಹೋದರೆ, ಬೇರೆ ವಿಧವಾಗಿ ನೀವು ಅಂದುಕೊಂಡರೆ ಅದೂ ಸಹ ಮಾಯೆಯೇ ಆಗುತ್ತದೆ. ಆದ್ದರಿಂದ ದೇವರಿಗೆ ದೂರವಾಗುವ ಮಾಯೆಯನ್ನು ಬಿಟ್ಟು, ದೇವರಿಗೆ ಹತ್ತಿರವಾಗುವ ಮಾಯೆ ಮಾತು ಕೇಳೋಣ. ಅಸಲಾದ ತಾಯಿ ತಂದೆಯರನ್ನು ಕುರಿತಾದ ಸಮಾಚಾರವನ್ನು ಇನ್ನು ನೋಡೋಣ.

ಒಬ್ಬ ಮನುಷ್ಯನಿಗೆ ತನ್ನ ಬಾಹ್ಯ ತಂದೆ ಯಾರಾಗಿರುವುದು ತನ್ನ ಬಾಹ್ಯ ತಾಯಿಯೇ ತಿಳಿಸಬೇಕು. ತನ್ನ ಮಗುವಿಗೆ ತಂದೆ ಯಾರು ಎನ್ನುವ

ವಿಷಯವು ತಾಯಿಗೆ ಮಾತ್ರ ತಿಳಿದಿರುವುದು. ಅದೇ ವಿಧವಾಗಿ ದೇವರು ಯಾರು ಎನ್ನುವ ವಿಷಯವು ಪ್ರಕೃತಿಗೆ ಮಾತ್ರವೆ ತಿಳಿದಿರುವುದು. ಬಾಹ್ಯ ಶರೀರ ತಾಯಿ ತನ್ನ ಮಗುವಿನ ಹತ್ತಿರ ಪ್ರತ್ಯಕ್ಷವಾಗಿ ಮಾತನಾಡುತ್ತಿದೆ, ಆದ್ದರಿಂದ ಸ್ವತಃ ತಾಯಿಯೆ ತಂದೆಯನ್ನು ತೋರಿಸುತ್ತಾಳೆ. ಇಲ್ಲಿ ಜೀವಿಗೆ ತಂದೆ ಸ್ಥಾನದಲ್ಲಿರುವ ಪರಮಾತ್ಮನನ್ನು, ತಾಯಿ ಸ್ಥಾನದಲ್ಲಿರುವ ಪ್ರಕೃತಿ ತೋರಿಸಬೇಕಾಗಿದೆ. ಆದರೆ ಪ್ರಕೃತಿ ಮನುಷ್ಯನ ಹತ್ತಿರ ಮಾತನಾಡದು. ಆದ್ದರಿಂದ ಪ್ರಕೃತಿ ದೇವರನ್ನು ಕುರಿತು ಜೀವಾತ್ಮನಿಗೆ ತಿಳಿಸಲಿಲ್ಲ. ಅಂತಹ ಸಮಯದಲ್ಲಿ ದೇವರೆ ಜೀವಾತ್ಮನಿಗೆ ದೇವರ ವಿಷಯವನ್ನು ತಿಳಿಸುವುದಕ್ಕೆ ಪ್ರಕೃತಿ ಪರವಾಗಿ ಕೆಲಸ ಮಾಡಬೇಕಾಗಿ ಬಂದಿದೆ. ಪ್ರಕೃತಿ ಪರವಾಗಿ ಕೆಲಸ ಮಾಡಿ, ದೇವರ ವಿಷಯವನ್ನು ತಿಳಿಸುವುದಕ್ಕೆ, ದೇವರ ಅಂಶ ಭಗವಂತನಾಗಿ ಬರುತ್ತದೆ. ಪ್ರಕೃತಿ ಮಾಯೆಯಾಗಿ ಮಾರ್ಪಟ್ಟು ಎಲ್ಲಕಾಲವು ಮನುಷ್ಯನಲ್ಲಿ ಇದ್ದರೆ, ದೇವರು ಮಾತ್ರ ಭಗವಂತನಾಗಿ ಯಾವಾಗಲೊ ಒಂದು ಬಾರಿ ಭೂಮಿಯ ಮೇಲೆ ಬರುತ್ತಾನೆ. ಪ್ರಕೃತಿ ಮನುಷ್ಯನಲ್ಲಿ ಮಾಯೆಯಾಗಿ ಬದಲಾಗಿದ್ದರೆ, ದೇವರು ಮನುಷ್ಯರ ಮಧ್ಯದಲ್ಲಿ ಭಗವಂತನಾಗಿ ಮಾರ್ಪಾಟು ಹೊಂದಿ ಬರುವನು. ಭಗವಂತನು ಪ್ರಕೃತಿಯಿಂದ ತಯಾರು ಮಾಡಿದ ಶರೀರವನ್ನು ಧರಿಸಿ ಕಾಣಿಸುವ ಮನುಷ್ಯನಾಗಿ ಹುಟ್ಟುವನು. ಹಾಗೆ ಹುಟ್ಟಿದವನು ಪ್ರಕೃತಿ ತಿಳಿಸಬೇಕಾದ ಪರಮಾತ್ಮನನ್ನು, ಪ್ರಕೃತಿ ಪರವಾಗಿ ತಾನು ತಿಳಿಸುತ್ತಾನೆ. ಪ್ರಕೃತಿ ಮಾಯೆಯ ರೂಪದಲ್ಲಿ ಮನುಷ್ಯನಲ್ಲಿದೆ. ಅದ್ದರಿಂದ ಪ್ರಕೃತಿ ಪರವಾಗಿ ಕೆಲಸ ಮಾಡಲು ಭಗವಂತನಾಗಿ ಬಂದಿರುವ ದೇವರು, ಪ್ರಕೃತಿಗೆ ಮತ್ತೊಂದು ರೂಪವಾದ ಮಾಯೆಯ ಹಾಗೆ ಪ್ರವರ್ತಿಸುವನು. ಮಾಯೆ ದೇವರ ಮಾರ್ಗಕ್ಕೆ ಆತಂಕವನ್ನು ಕಲ್ಪಿಸುವುದಕ್ಕಾಗಲಿ, ದೇವರ ಮಾರ್ಗವನ್ನು ಸುಗಮವಾಗಿ ಮಾಡುವುದಕ್ಕಾಗಲಿ ಹೇಗೆ ಯೋಗ್ಯತೆಯಿಂದ ಇದೆಯೊ, ಹಾಗೆ ಭಗವಂತನಾಗಿ ಬಂದಿರುವವನು ತಾನು ಪ್ರಕೃತಿ ಆದ ಮಾಯೆಯಂತೆ ಪ್ರವರ್ತಿಸುತ್ತಾ ಅಗತ್ಯವಿರುವವರನ್ನು, ಯೋಗ್ಯತೆ ಇರುವವರನ್ನು ದೇವರ ಮಾರ್ಗವನ್ನು ಸೇರಿಸುವನು.

ಅಗತ್ಯವಿಲ್ಲದವರನ್ನು, ಯೋಗ್ಯತೆ ಇಲ್ಲದವರನ್ನು ದೇವರ ಮಾರ್ಗದಿಂದ ತಪ್ಪಿಸುವನು. ಭಗವಂತನನ್ನೇ ಗುರುವು ಎಂದು ಅನ್ನಬಹುದು. ಗುರು ಅಥವಾ ಭಗವಂತನು ಭೂಮಿಮೇಲೆ ಬಂದರೆ, ಜ್ಞಾನದ ಮೇಲೆ ಆಸಕ್ತಿ ಇರುವವರಿಗೆ ಗುರುವಾಗಿ ಕಾಣಿಸುವನು. ಆಸಕ್ತಿ ಇಲ್ಲದವರಿಗೆ ಮಾಯೆಯಾಗಿ ಕಾಣಿಸಿ, ದೇವರ ಜ್ಞಾನವನ್ನು ತಿಳಿಯದ ಹಾಗೆ ಮಾಡುವನು. ದೇವರು ತನ್ನ ಪ್ರಕೃತಿಯಿಂದ ತಯಾರಾದ ದೇಹವನ್ನು ಅಧಿಷ್ಠಿಸಿ, ಮಾಯೆಯ ಗುಣ ಭಾವನೆಗಳು ಹೊಂದಿ ಭಗವಂತನಾಗಿ ಹುಟ್ಟುತ್ತಿದ್ದಾನೆ. ಭಗವಂತನು ದೇವರ ಅಂಶವೇ ಆಗಿರುವುದರಿಂದ ದೇವರ ಜ್ಞಾನವನ್ನು ತಿಳಿಸುವನು. ಹಾಗೆಯೆ ಭಗವಂತನು ಪ್ರಕೃತಿಯನ್ನು ಅಧಿಷ್ಠಿಸಿ ಪ್ರಕೃತಿ ಪಾತ್ರವನ್ನು ಪೋಷಿಸಬೇಕಾಗಿರುವುದರಿಂದ, ಮಾಯೆಯಾಗಿ ದೇವರ ಜ್ಞಾನವನ್ನು ತಿಳಿಯದ ಹಾಗೆ ಮಾಡುವನು.

ಭಗವಂತನು (ಗುರುವು) ತಿಳಿಯಪಡಿಸುವ ಒಂದೇ ಜ್ಞಾನವು ಮನುಷ್ಯನಿಗೆ ಅರ್ಥವಾಗುವುದರಲ್ಲಿ ಸವ್ಯವಾಗಿಯಾಗಲಿ, ಅಪಸವ್ಯವಾಗಿಯಾಗಲಿ ಎರಡು ವಿಧದಲ್ಲಿ ಅರ್ಥವಾಗುವುದು. ಸವ್ಯವಾಗಿ ಅರ್ಥವಾದರೆ ಅದು ದೇವರ ಜ್ಞಾನವಾಗಿ ಕಾಣಿಸಿ ದೇವರಕಡೆ ಕಳಿಸುವುದು. ಅಪಸವ್ಯವಾಗಿ ಅರ್ಥವಾದರೆ ತಿಳಿದುಕೊಂಡಿರುವುದು ದೇವರ ಜ್ಞಾನದಂತೆ ಕಾಣಿಸದೆ ಅದು ಜ್ಞಾನವೇ ಅಲ್ಲ ಎನ್ನುವ ಹಾಗೆ ತಿಳಿದು, ಜ್ಞಾನಕ್ಕೆ ದೂರ ಆಗುವಹಾಗೆ ಮಾಡಿ ಮಾಯೆ ಕಡೆ ಕಳಿಸುವುದು. ಇದರಿಂದ ಗುರುವು (ಭಗವಂತನು) ಮಾಯೆ ಸ್ಥಾನದಲ್ಲಿದ್ದು ದೇವರ ಮಾರ್ಗಕ್ಕು, ದೇವರ ಜ್ಞಾನಕ್ಕು ದೂರ ಮಾಡಬಲ್ಲನು. ಹಾಗೆಯೇ ದೇವರ ಮಾರ್ಗಕ್ಕು, ದೇವರ ಜ್ಞಾನಕ್ಕು ಹತ್ತಿರವೂ ಮಾಡಬಲ್ಲನು. ಆದ್ದರಿಂದ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಆರನೇ ಶ್ಲೋಕದಲ್ಲಿ "ಪ್ರಕೃತಿಂ ಸ್ವಾಮಧಿಷ್ಟಾಯ ಸಂಭವಾಮ್ಯಾತ್ಮ ಮಾಯಯಾ" ನನ್ನ ಪ್ರಕೃತಿಯನ್ನು ಅಧಿಷ್ಠಿಸಿ ಮಾಯೆ ಪರವಾಗಿ (ಮಾಯೆಯಂತೆ) ನನ್ನ ಆತ್ಮ ಹುಟ್ಟುತ್ತಿದೆ ಎಂದು ಹೇಳಿರುವುದು ನಡೆದಿದೆ. ದೇವರು ಭಗವಂತನಾಗಿ ಹುಟ್ಟಿದರೂ, ದೇವರನ್ನು ಕುರಿತು ತಿಳಿಯ ಹೇಳುವುದು ಭಗವಂತನೇ ಆದರೂ, ಆತನು ಬಂದಿರುವುದು

ಪ್ರಕೃತಿ ಕಡೆಯಿಂದ ಮಾಯೆಯಂತೆ ಬಂದಿದ್ದಾನೆಂದು ತಿಳಿಯುತ್ತಿದೆ. ಆದ್ದರಿಂದ ಆತನು ಹೇಳಿದ ಜ್ಞಾನವು ಒಂದೇ ಆದರೂ, ಅದು ದೇವರಕಡೆಗಾಗಲಿ ಅಥವಾ ಮಾಯೆಯ ಕಡೆಗಾಗಲಿ ತೆಗೆದುಕೊಂಡು ಹೋಗುವುದು. ಈ ವಿಷಯವು ಅರ್ಥವಾಗುವುದಕ್ಕೆ ಒಂದು ಉದಾಹರಣೆಯನ್ನು ನೋಡೋಣ. ಕಾಣಿಸುವ ಶರೀರ ತಾಯಿ, ಶರೀರ ತಂದೆಯನ್ನು ಕುರಿತು ತಿಳಿಸುವುದೆಂದು, ತಾಯಿಗೆ ಮಾತ್ರವೆ ಮಗುವಿನ ತಂದೆ ಯಾರೆಂದು ತಿಳಿದಿರುವುದೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಅಂತಹ ಸ್ಥಾನದಲ್ಲಿರುವ ಒಬ್ಬ ತಾಯಿಗೆ ಮೂವರು ಕುಮಾರರು ಇರುತ್ತಾರೆ. ಮೂವರು ಮಕ್ಕಳು ಐದು ವರ್ಷಗಳ ಅವಧಿಯಲ್ಲಿ ಹುಟ್ಟಿದ್ದಾರೆ. ಮೂವರು ಮಕ್ಕಳು ಹುಟ್ಟಿದ ನಂತರ ಒಂದು ವರ್ಷಕ್ಕೆ ತಂದೆ ವ್ಯಾಪಾರ ನಿಮಿತ್ತವಾಗಿ ವಿದೇಶಗಳಿಗೆ ಹೋಗಿದ್ದಾರೆ. ಅಲ್ಲಿಂದ ಬರುವುದಕ್ಕೆ 12ವರ್ಷಗಳ ಕಾಲ ಬೇಕಾಗಿದೆ. ಪತಿ ಬರುವ ಸಮಯಕ್ಕೆ ತಮ್ಮ ಮಕ್ಕಳಿಗೆ ಚಿಕ್ಕವನಿಗೆ 13 ವರ್ಷಗಳು, ಎರಡನೆಯವನಿಗೆ 16 ವರ್ಷಗಳು, ದೊಡ್ಡವನಿಗೆ 18 ವರ್ಷಗಳ ವಯಸ್ಸಿದೆ. ಚಿಕ್ಕ ವಯಸ್ಸಿನಲ್ಲಿಯೆ ಅವರ ತಂದೆ ಅವರಿಗೆ ತಿಳಿಯದೆ ಇರುವುದರಿಂದ, ಸ್ವಲ್ಪಕಾಲದ ನಂತರ ಬಂದಿರುವ ತಂದೆಯನ್ನು ಕುರಿತು ತಾಯಿ ಹೇಳಬೇಕಾಗಿ ಬಂದಿದೆ. ತಮ್ಮ ಮಕ್ಕಳಿಗೆ ತಂದೆ ಯಾರು ಎನ್ನುವ ರಹಸ್ಯ ತಾಯಿಗೆ ಮಾತ್ರವೆ ತಿಳಿದಿರುವುದರಿಂದ, ಈತನೆ ನಿಮ್ಮ ತಂದೆಯೆಂದು ತಾಯಿ ಹೇಳಿದಳು. ತಾಯಿ ಒಂದೇ ಭಾವವಿರುವ, ಒಂದೇ ಅರ್ಥ ಇರುವ ವಿಷಯವನ್ನು ಎಲ್ಲರಿಗೂ ಸಮಾನವಾಗಿ ಹೇಳಿದ್ದಾಳೆ. ಎಲ್ಲರೂ ಒಂದೇ ಸಮಯದಲ್ಲಿ ಒಂದುಕಡೆ ಇಲ್ಲವಾದ್ದರಿಂದ, ಮೂವರು ಕುಮಾರರು ಬೇರೆ ಬೇರೆ ಕೆಲಸಗಳನ್ನು, ಬೇರೆ ಬೇರೆ ಸ್ಥಳಗಳಲ್ಲಿ ಮಾಡುತ್ತಿರುವುದರಿಂದ, ಎಲ್ಲರಿಗೂ ಒಂದೇ ಬಾರಿ ಹೇಳಲು ಸಾಧ್ಯವಾಗಲಿಲ್ಲ. ಮೂವರು ಮಕ್ಕಳು ಬಿಡಿಬಿಡಿಯಾಗಿ ಬೇರೆ ಬೇರೆ ಸಮಯಗಳಲ್ಲಿ ಮನೆಗೆ ಬಂದಾಗ, ಅವರಿಗೆ ಬಿಡಿಬಿಡಿಯಾಗಿಯೆ ಈತನೆ ನಿಮ್ಮ ತಂದೆ ಎಂದು ಹೇಳುವುದು ನಡೆದಿದೆ.

ಹಿಂದಿನ ರಾತ್ರಿ ಮನೆಗೆ ಬಂದ ದೊಡ್ಡ ಮಗನಿಗೆ ತನ್ನ ತಂದೆಯ ವಿಷಯವನ್ನು ತಾಯಿ ಹೇಳಿದಳು. ಆತನು ಆ ಸಮಯದಲ್ಲಿ ನಿದ್ರೆ ಮತ್ತಿನಲ್ಲಿ ಇದ್ದಿದ್ದರಿಂದ ತಾಯಿ ಹೇಳಿದ ಮಾತನ್ನು ಕೇಳಿದರೂ "ಈತನೇ ನಿಮ್ಮ ತಂದೆ" ಎನ್ನುವ ಮಾತು ಈತನೆ ನಮ್ಮ ತಂದೆ ಎನ್ನುವಂತೆ ಅರ್ಥವಾಗಿದೆ. ಆಗ ತನ್ನ ತಾಯಿ ಹೇಳಿದ ವಿಷಯವು ಬೇರೆ ರೀತಿಯಲ್ಲಿ ಅರ್ಥವಾಗಿ ಹೋಗಿ, ತಾಯಿ ತೋರಿಸಿದ ಮನುಷ್ಯನನ್ನು ತನಗೆ ತಾತನೆಂದು ಹೋಲಿಸಿಕೊಂಡಿದ್ದಾನೆ. ಎರಡನೆಯ ದಿನ ಬೆಳಗ್ಗೆ ಎರಡನೆಯ ಮಗ ಬಂದಾಗ, ದೊಡ್ಡ ಮಗನಿಗೆ ತಿಳಿಸಿದ ವಿಷಯವನ್ನೇ ತಾಯಿ ಆತನಿಗು ಸಹ ತಿಳಿಸುತ್ತಾ "ಈತನೆ ನಿಮ್ಮ ಹೆತ್ತ ತಂದೆ" ಎಂದು ಹೇಳಿದಳು. ತಾಯಿ ಹೇಳಿದ ವಿಷಯವನ್ನು ಶ್ರದ್ದೆಯಿಂದ ಕೇಳದ ಎರಡನೆ ಮಗನು "ಈತನೆ ನಿಮ್ಮ ಚಿಕ್ಕ ತಂದೆ" ಎಂದು ಹೇಳಿದ ಹಾಗೆ ಅರ್ಥವಾಗಿದೆ. ಅದೇ ದಿನ ಸಾಯಂಕಾಲ ಮನೆಗೆ ಬಂದ ಚಿಕ್ಕ ಕುಮಾರನಿಗೆ "ಈತನೆ ನನ್ನ ಪತಿ" ಯೆಂದು ತಾಯಿ ಹೇಳಿದಳು, ಆತನು ವಯಸ್ಸಿನಲ್ಲಿ ಚಿಕ್ಕವನಾದ್ದರಿಂದ, ತಾಯಿಗೆ ಪತಿ ತನಗೆ ಏನಾಗುತ್ತಾನೋ ಸಹ ತಿಳಿಯದು. ಅಂತಹ ಸಮಯದಲ್ಲಿ ತಾಯಿ ತೋರಿಸಿದ ವ್ಯಕ್ತಿಯನ್ನು ತಮಗೆ ಬಂಧುವು ಎಂದು ಅಂದುಕೊಂಡಿದ್ದಾನೆ. ಆದರೆ ತಂದೆ ಎಂದು ಅರ್ಥವಾಗಲಿಲ್ಲ. ಈ ವಿಧವಾಗಿ ಮೂವರು ಕುಮಾರರಿಗೆ ತಾಯಿ ಹೇಳಿದ ಸತ್ಯವು ಅರ್ಥವಾಗದೆ ತಮ್ಮ ತಂದೆಯನ್ನು ಒಬ್ಬರು ತಾತನೆಂದು, ಒಬ್ಬರು ಚಿಕ್ಕಪ್ಪನೆಂದು, ಮತ್ತೊಬ್ಬರು ಬಂಧುವೆಂದು ಅರ್ಥ ಮಾಡಿಕೊಂಡಿದ್ದಾರೆ. ತಂದೆಯ ವಿಷಯವನ್ನು ತಿಳಿಸಿದ ತಾಯಿಗೆ ಅದೇ ದಿನ ರೋಗ ಬಂದು ವೈದ್ಯಶಾಲೆಗೆ (ಆಸ್ಪತ್ರಿಗೆ) ಹೋಗಿದ್ದಾಳೆ. ಆಕೆ ರೋಗಕ್ಕೆ ತಕ್ಕ ಚಿಕಿತ್ಸೆಗಾಗಿ ಆಕೆಯನ್ನು ತಿಂಗಳ ಕಾಲ ಹಾಸಿಗೆ ಮೇಲೆಯೇ ಅಸ್ಪತ್ರೆಯಲ್ಲಿ ಇರಬೇಕೆಂದು ವೈದ್ಯರು ಹೇಳಿರುವುದರಿಂದ ಅವರ ತಾಯಿ ಅಲ್ಲಿಯೆ ಇರಬೇಕಾಯಿತು. ಆಕೆಗೆ ಆರೋಗ್ಯ ಸರಿ ಇಲ್ಲವಾದ್ದರಿಂದ ಆಕೆಯ ಸೋದರನು (ತಮ್ಮನು) ವೈದ್ಯ ಶಾಲೆಗೆ ಹೋಗಿ, ತನ್ನ ಅಕ್ಕ ಬಾವನನ್ನು ಮಾತನಾಡಿಸಿದ ನಂತರ ತನ್ನ ಸೋದರ ಅಳಿಯಂದಿರನ್ನು ಮಾತನಾಡಿಸಲು,

ಅಕ್ಕನ ಮನೆಗೆ ಬಂದು ಅಲ್ಲಿಯೇ ಸ್ವಲ್ಪದಿನ ಉಳಿದುಕೊಂಡಿದ್ದಾನೆ. ಆಗ ತನಗೆ ಬಾವ, ಅಕ್ಕನಿಗೆ ಪತಿ, ಅಳಿಯಂದಿರಿಗೆ ತಂದೆ ಆದವನನ್ನು ತನ್ನ ಅಳಿಯಂದಿರು ತಪ್ಪಾಗಿ ಅರ್ಥಮಾಡಿಕೊಂಡಿದ್ದಾರೆಂದು ಆತನಿಗೆ ತಿಳಿಯಿತು. ಸ್ವಂತ ತಂದೆಯನ್ನು ಮೂವರು ಕುಮಾರರು ತಂದೆಯೆಂದು ಅರ್ಥಮಾಡಿಕೊಳ್ಳದೆ ಬೇರೆ ಬೇರೆ ವಿಧಗಳಾಗಿ ಹೇಳಿಕೊಂಡಿರುವುದು ಆತನಿಗೆ ಆಶ್ಚರ್ಯ ಕಲ್ಪಿಸಿದೆ. ಅವರಿಗೆ ಆತನು ಸೋದರಮಾವ ಆಗಿರುವುದರಿಂದ, ಅವರ ತಾಯಿ ನನಗೆ ಅಕ್ಕ ಆಗಿರುವುದರಿಂದ, ಅವರ ತಂದೆ ಸ್ವಂತ ಬಾವ ಆಗಿರುವುದರಿಂದ, ತನ್ನ ಅಳಿಯಂದಿರು ಪೂರ್ತಿ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆಂಬ ಸತ್ಯ ಅರ್ಥವಾಗಿದೆ. ಅವರೊಳಗಿನ ಭಾವವನ್ನು ತೊಲಗಿಸಿ ಅವರ ಮೂವರಿಗು ತಂದೆ ಒಬ್ಬನೆ ಎಂದು, ಅವರು ಹುಟ್ಟುವ ಮುಂಚಿನಿಂದಲು ಅವರ ತಂದೆ ನನಗೆ ಗೊತ್ತಿರುವನೆಂದು ಮೂವರು ಅಳಿಯಂದರಿಗೆ ತಿಳಿಸುತ್ತಾನೆ. ಚಿಕ್ಕವನು ಒಬ್ಬನು ಮಾತ್ರ ತನ್ನ ಮಾವನವರು ಹೇಳಿದ ಮಾತನ್ನು ನಂಬಿ ಒಪ್ಪಿಕೊಳ್ಳುತ್ತಾನೆ. ಉಳಿದವರು ಇಬ್ಬರೂ ತನ್ನ ಮಾವ ಹೇಳಿದ ಮಾತನ್ನು ನಂಬದೆ ಅವರವರ ವಾದವನ್ನು ಅವರು ತಿಳಿಸುತ್ತಾರೆ. ನಮ್ಮ ತಾಯಿ ನನಗೆ ಹೀಗೆಯೇ ಹೇಳಿದ್ದಾಳೆಂದು ಒಬ್ಬನು ಎಂದರೆ, ಇಲ್ಲ ನನಗೆ ಹೀಗೆಯೇ ಹೇಳಿದ್ದಾಳೆಂದು ಮತ್ತೊಬ್ಬನು ಎನ್ನುವುದನ್ನು ಆರಂಭಿಸಿದರು. ಒಬ್ಬನೇನೋ ತಂದೆಯನ್ನು ತಾತ ಎನ್ನುತ್ತಾನೆ, ಮತ್ತೊಬ್ಬನೇನೋ ತಂದೆಯನ್ನು ಚಿಕ್ಕಪ್ಪ ಎಂದು ಎನ್ನುತ್ತಾನೆ. ಅವರ ಸಂಶಯವನ್ನು ತೀರಿಸಲು ಅವರ ತಾಯಿ ಅಲ್ಲಿಲ್ಲ. ಅವರ ತಾಯಿ ಬಂದ ನಂತರ ಅವರ ಅನುಮಾನವು ಇಲ್ಲದ ಹಾಗೆ ಮಾಡುತ್ತಾಳೆ ಎಂದು ಅವರ ಸೋದರಮಾವ ಎಂದುಕೊಳ್ಳುತ್ತಾನೆ. ಆದರೆ ಅವರ ತಾಯಿ ಆಸ್ಪತ್ರೆಯಲ್ಲಿಯೆ ಸತ್ತು ಹೋಗಿದ್ದಾಳೆ. ಹೆಂಡತಿ ಸತ್ತಿರುವುದನ್ನು ನೋಡಿದ ಗಂಡನು ಸಹ ಗುಂಡಿಗೆ (ರಕ್ತಕೋಶ) ನಿಂತು ಸತ್ತು ಹೋಗುವುದು ನಡೆದಿದೆ. ಮೂವರು ಕುಮಾರರು ನಮ್ಮ ತಾಯಿ ಸತ್ತು ಹೋಗಿದ್ದಾಳೆಂದು ಬಾಧೆ ಪಟ್ಟರೂ ಅದರಲ್ಲಿ ಒಬ್ಬನು ಮಾತ್ರ ತನ್ನ ತಾಯಿಯ ಜೊತೆ ತಂದೆ ಸಹಾ ಸತ್ತು

ಹೋಗಿದ್ದಾನೆಂದು ಅಂದು ಕೊಳ್ಳುತ್ತಾನೆ. ಉಳಿದ ಇಬ್ಬರಲ್ಲಿ ತಮ್ಮ ತಾಯಿಯೊಂದಿಗೆ ತಾತನು ಸಹ ಸತ್ತು ಹೋಗಿದ್ದಾನೆಂದು ಒಬ್ಬನು ಅಂದುಕೊಂಡರೆ, ಮತ್ತೊಬ್ಬನು ತಾಯಿಯೊಂದಿಗೆ ಚಿಕ್ಕಪ್ಪನು ಸಹಾ ಸತ್ತು ಹೋಗಿದ್ದಾನೆಂದು ಅಂದುಕೊಂಡನು. ಅವರ ತಾಯಿ ಇಲ್ಲವಾದ್ದರಿಂದ ಇಬ್ಬರಿಗೆ ತಂದೆ ವಿಷಯವು ತಿಳಿಯದೆ ಹೋಗಿದೆ. ಸೋದರಮಾವ ಹೇಳಿದರೂ ಕೇಳುವ ಸ್ಥಿತಿಯಲ್ಲಿ ಅವರು ಇಲ್ಲದೆ ಹೋಗಿದ್ದಾರೆ. ಅವರು ಇಬ್ಬರು ತಮಗೆ ಮುಂಚೆ ಅರ್ಥವಾದ ಅಸತ್ಯವನ್ನೆ ಸತ್ಯವೆಂದು ಅಂದುಕೊಳ್ಳುತ್ತಾ, ನಂತರ ತಿಳಿದ ಸತ್ಯವನ್ನು ಅಸತ್ಯವಾಗಿ ಲೆಕ್ಕಿಸಿಕೊಂಡಿದ್ದಾರೆ.

ಸೋದರ ಮಾವ ಎಷ್ಟು ಹೇಳಿದರೂ ಅವರು ಇಬ್ಬರು ಕೇಳದೆ ಅವರ ತಂದೆಯನ್ನು ಅವರು ಒಪ್ಪಿಕೊಳ್ಳದೆ ಒಬ್ಬನು ಚಿಕ್ಕಪ್ಪ ಎಂದರೆ, ಮತ್ತೊಬ್ಬನು ತಾತ ಎನ್ನುತ್ತಿದ್ದಾನೆ. ಒಬ್ಬನು ಮಾತ್ರ ತನ್ನ ತಂದೆಯನ್ನು ಒಪ್ಪಿಕೊಂಡಿದ್ದಾನೆ. ತಂದೆ ಸತ್ತು ಹೋದ ನಂತರ ಆಸ್ತಿಯನ್ನು ಸ್ವತ: ಸೋದರ ಮಾವನೆ ಮಕ್ಕಳಿಗೆ ಹಂಚಿ ಕೊಡಬೇಕೆಂದುಕೊಂಡಿದ್ದಾನೆ. ಆದರೆ ಸೋದರ ಮಾವ ಮೂವರು ಅಳಿಯಂದರಿಗೆ ಒಂದು ನಿಯಮವನ್ನು ಇಟ್ಟಿದ್ದಾನೆ. ಆ ನಿಯಮದ ಪ್ರಕಾರ ತಾನು ಹೇಳಿದ ಹಾಗೆ ತನ್ನ ಬಾವನನ್ನು ಯಾರಾದರೆ ತಂದೆಯಾಗಿ ಒಪ್ಪಿಕೊಳ್ಳುತ್ತಾರೊ ಅವರಿಗೆ ತಂದೆಯ ಆಸ್ತಿಯಲ್ಲಿ ಭಾಗ ಬರುತ್ತದೆಂದು, ತಂದೆಯಾಗಿ ಒಪ್ಪಿಕೊಳ್ಳದವರಿಗೆ ಅವರ ತಂದೆ ಆಸ್ತಿಯಲ್ಲಿ ಭಾಗ ಬರುವುದಿಲ್ಲ ಎಂದು ಹೇಳುತ್ತಾನೆ. ಆಗಲೂ ಸಹ ತಮಗಿರುವ ವಿಶ್ವಾಸವನ್ನು ಬಿಟ್ಟು ಬೇರೆಯಾಗಿ ಒಪ್ಪಿಕೊಳ್ಳುವುದಿಲ್ಲವೆಂದು ಇಬ್ಬರು ಹೇಳಿದಾಗ, ಅವರಿಗೆ ಆಸ್ತಿಯಲ್ಲಿ ಭಾಗ ಬಾರದೆ ಹೋಗಿದೆ. ತಾಯಿ ಪತಿ ಎಂದು ಹೇಳಿದಾಗ ಅಲ್ಲಿಯವರೆಗೂ ಬಂಧುವಾಗಿ ಅರ್ಥಮಾಡಿಕೊಂಡಿರುವುದು ತನ್ನ ತಪ್ಪೆಂದು, ತನ್ನ ಸೋದರ ಮಾವ ಹೇಳಿರುವುದೇ ಸತ್ಯವೆಂದು, ಸತ್ಯದ ಪ್ರಕಾರ ತಾನು ಬಂಧುವು ಅಂದುಕೊಂಡ ವ್ಯಕ್ತಿ ಬಂಧುವು ಅಲ್ಲ, ನಿಜವಾಗಿ ತನಗೆ ತಂದೆಯೆಂದು ತಿಳಿದಿದ್ದರಿಂದ, ಚಿಕ್ಕಮಗನಿಗೆ ತಂದೆ ಆಸ್ತಿ ಎಲ್ಲಾ ಲಭಿಸಿದೆ. ಉಳಿದ ಇಬ್ಬರಿಗೆ

ತಂದೆಯನ್ನು ತಂದೆ ಎಂದು ಒಪ್ಪಿಕೊಳ್ಳದೆ ಹೋಗಿದ್ದರಿಂದ, ತಂದೆ ಆಸ್ತಿ ಲಭಿಸದೆ ಹೋಗಿದೆ. ಇದನ್ನೆಲ್ಲ ಗಮನಿಸಿದರೆ ತಾಯಿ ಹೇಳಿದ ಸತ್ಯವನ್ನು ಕುಮಾರರು ಮುಂಚೆಯೇ ಗಮನಿಸದೆ ಹೋಗಿದ್ದರಿಂದ ತಂದೆ ಆಸ್ತಿ ಇಬ್ಬರಿಗೆ ಬಾರದೆ ಹೋಗಿದೆ ಎಂದು ಅರ್ಥವಾಗುತ್ತಿದೆ. ಈ ಉದಾಹರಣೆಯಲ್ಲಿ ತಾಯಿಯನ್ನು ಪ್ರಕೃತಿಯಾಗಿ, ತಂದೆಯನ್ನು ಪರಮಾತ್ಮನಾಗಿ, ಕುಮಾರರನ್ನು ಜೀವಾತ್ಮರಾದ ಮನುಷ್ಯರಾಗಿ ಲೆಕ್ಕಿಸಿಕೊಂಡು ನೋಡಬೇಕಾಗಿದೆ. ಪ್ರಕೃತಿ ಆದ ತಾಯಿ, ತಂದೆಯನ್ನು ಕುರಿತು ಹೇಳಿದ ಮೂಲ ಗ್ರಂಥಗಳಾಗಿ ಲೆಕ್ಕಿಸಿಕೊಳ್ಳೋಣ. ತಾಯಿ ಮೂವರು ಮಕ್ಕಳಿಗೆ ಒಂದೇ ತಂದೆಯ ವಿಷಯವನ್ನು ಹೇಳಿದಹಾಗೆ, ಮೂರು ಮತ ಗ್ರಂಥಗಳಲ್ಲಿ ಒಂದೇ ದೇವರನ್ನು ಕುರಿತು ಹೇಳಿದ ವಿಧಾನವಿದೆ. ಆದರೆ ಮೂರು ಮೂಲ ಗ್ರಂಥಗಳೊಳಗಿನ ಉದ್ದೇಶವು, ಭಾವವು ಎಲ್ಲಾ ಒಂದೇ ತಂದೆ (ದೇವರ) ಸಮಾಚಾರವನ್ನು ತಿಳಿಸುತ್ತಿದ್ದರೂ, ಆ ಸಮಾಚಾರವು ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಅರ್ಥವಾಗಿದೆ. ಮೂಲ ಗ್ರಂಥಗಳು ಹೇಳಿದ ಹಾಗೆ ಎಲ್ಲರಿಗೂ ಒಂದೇ ದೇವರೆಂದು (ಒಬ್ಬನೇ ತಂದೆ ಎಂದು) ತಿಳಿದುಕೊಳ್ಳದೆ, ಮಕ್ಕಳಾದ ಮನುಷ್ಯರು ಮೂವರು ಮೂರು ವಿಧಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಒಬ್ಬನು ತಾತನೆಂದು, ಒಬ್ಬನು ಚಿಕ್ಕಪ್ಪನೆಂದು, ಒಬ್ಬನು ಬಂಧುವು ಎಂದಹಾಗೆ ಈದಿನ ಮೂರು ಮತದವರು ಹೇಳುವುದು ಒಂದೇ ದೇವರನ್ನಾದರೂ, ಅವರು  ಆ ದೇವರನ್ನು ಬೇರೆ ಬೇರೆ ಭಾವಗಳಿಂದ ಲೆಕ್ಕಿಸಿಕೊಂಡು ಒಬ್ಬನು ಯೆಹೋವಾ ಎಂದು, ಒಬ್ಬನು ರಾಮ ಎಂದು, ಮತ್ತೊಬ್ಬನು ಅಲ್ಲಾಹ್ ಎಂದು ಅನ್ನುತ್ತಿದ್ದಾರೆ. ಮೂವರು ಮಕ್ಕಳು ತಾತ, ಚಿಕ್ಕಪ್ಪ, ಬಂಧುವು ಎಂದು ಬೇರೆ ಬೇರೆಯಾಗಿ ಹೇಳಿಕೊಂಡರೂ ಆತನು ಒಬ್ಬನೇ ವ್ಯಕ್ತಿಯೆಂದು, ಹಾಗೆ ಈ ದಿನ ಮೂರು ಸಮಾಜದವರು, ಮೂರು ಹೆಸರುಗಳಿಂದ ಹೇಳುತ್ತಿರುವವನು ಒಬ್ಬನೇ ದೇವರೆಂದು, ಪ್ರಕೃತಿಯನ್ನು ಪರಮಾತ್ಮನನ್ನು ಚೆನ್ನಾಗಿ ತಿಳಿದ ಸೋದರ ಮಾವ ನಂತಹ ಯೋಗಿಗಳು ಹೇಳಿದರೂ, ಮತ ಮೌಢ್ಯದಲ್ಲಿ ಎಲ್ಲರಿಗೂ ದೇವರು ಒಬ್ಬನೇ ಎಂದು ಒಪ್ಪಿಕೊಳ್ಳದೆ

ಹೋಗುತ್ತಿದ್ದಾರೆ. ಯೋಗಿ ಆದವನು ಸೋದರ ಮಾವನಂತೆ ಮೂರು ಮತಗಳಿಗೂ ಸಮಾನ ಸಂಬಂಧವು ಹೊಂದಿದ್ದು, ಮೂವರ ಒಳ್ಳೆಯದನ್ನು ಕೋರಿ **"ನೀವು ಮೋಸ ಹೋಗುತ್ತಿದ್ದೀರ. ನಿಮಗೆ ಅರ್ಥವಾಗಿರುವುದು ಸತ್ಯವಲ್ಲ. ತಾಯಿ ಮಾತನ್ನು ನೀವು ಸರಿಯಾಗಿ ಅರ್ಥಮಾಡಿಕೊಳ್ಳದ ಹಾಗೆ, ಮೂಲ ಗ್ರಂಥಗಳೊಳಗಿನ ವಾಕ್ಯವನ್ನು ನೀವು ಸರಿಯಾಗಿ ಅರ್ಥಮಾಡಿಕೊಂಡಿಲ್ಲವೆಂದು"** ಹೇಳಿದರೂ ಯೋಗಿಯ ಮಾತು ಕೇಳುತ್ತಿಲ್ಲ. ಯೋಗಿ ಆದವನು ತಮಗಿಂತ ಮುಂಚಿನಿಂದಲೂ ಪ್ರಕೃತಿ ಪರಮಾತ್ಮರ ವಿಷಯವನ್ನು ತಿಳಿದವನೆಂದು, ಅವರೊಂದಿಗೆ ಸಂಬಂಧ ಹೊಂದಿರುವವನೆಂದು, ಆತನಿಗೆ ತಮ್ಮ ದೇವರ (ತಂದೆ) ವಿಷಯವು ಪೂರ್ತಿಯಾಗಿ ತಿಳಿದಿರುವುದೆಂದು ಯಾರೂ ಗ್ರಹಿಸದೆ, ಹಿತವು ಹೇಳುವ ಯೋಗಿಯ ಮಾತನ್ನು ಲೆಕ್ಕಿಸದೆ ಇದ್ದಾರೆ. ಕೊನೆಗೆ ಮಾವನಂತಹ ಯೋಗಿ ಹೇಳುವುದು ಮತಾತೀತ ಜ್ಞಾನವೆಂದು, ತಪ್ಪಿಗೆ ದಾರಿಯಿಲ್ಲ ಎಂದು ತಿಳಿದವನು ಎಲ್ಲ ಮತಗಳಿಗು ದೇವರು ಒಬ್ಬನೇ ಎಂದು ಅಂಗೀಕರಿಸುವನು. ಹಾಗೆ ತಂದೆಯಾದ ದೇವರು ಉಳಿದ ಎಲ್ಲರಿಗೂ ಸಹ ದೇವರೆಂದೇ ತಿಳಿಯುವುದರಿಂದ, ದೇವರ (ತಂದೆ) ಆಸ್ತಿ ಆದ ಪರಮವನ್ನು (ಮೋಕ್ಷವನ್ನು) ಹೊಂದುತ್ತಿದ್ದಾನೆ. ತಾಯಿ ಯಂತಹ ಮೂಲ ಗ್ರಂಥಗಳಲ್ಲಿ ಹೇಳಿದ ಪ್ರವಕ್ತರ ಮಾತುಗಳನ್ನು ತಪ್ಪಾಗಿ ಅರ್ಥಮಾಡಿಕೊಂಡವರು ತಾವು ತಿಳಿದುಕೊಂಡ ದೇವರು ಬೇರೆ ಎಂದು ಇತರರ ದೇವರು ಬೇರೆ ಎಂದು, ಎಂದುಕೊಳ್ಳುವುದರಿಂದ ಇತರ ಮತಗಳ ದೇವರನ್ನು ತಮ್ಮ ದೇವರೆಂದು, ತಮ್ಮ ದೇವರೇ ಇತರ ಮತಗಳ ದೇವರೆಂದು ಒಪ್ಪಿಕೊಳ್ಳದೆ ಹೋಗುವುದರಿಂದ ಅವರಿಗೆ ಮೋಕ್ಷವು ಅಥವಾ ಪರಮವು ಲಭಿಸುವುದಿಲ್ಲ.

ಈದಿನ ಭೂಮಿ ಮೇಲೆ ಮಾನವರೆಲ್ಲರೂ ಒಂದೇ ದೈವದಿಂದ ಸೃಷ್ಟಿಸಲ್ಪಟ್ಟಿರುವವರಾದರೂ, ಮನುಷ್ಯರು ಮತಗಳಾಗಿ ಬೇರ್ಪಟ್ಟು, ನಿಮ್ಮ ದೇವರು ನಮ್ಮ ದೇವರಲ್ಲ, ನಮ್ಮ ದೇವರು ನಿಮ್ಮ ದೇವರಲ್ಲ ಎಂದು ಎನ್ನುತ್ತಿದ್ದಾರೆ. ಒಂದು ಮತದೊಳಗಿನ ದೇವರನ್ನು ಮತ್ತೊಂದು ಮತದವರು

ಅಸೂಯದಿಂದ ನೋಡುತ್ತಿದ್ದಾರೆ. ಯೆಹೋವಾನನ್ನು ಒಪ್ಪಿಕೊಳ್ಳದಿದ್ದವರು ದೇವರು ಅಲ್ಲಾಹ್ ಎಂದು ಅನ್ನುತ್ತಿದ್ದಾರೆ. ಕೆಲವರು ಅಲ್ಲಾಹ್ ದೇವರಲ್ಲ ರಾಮನೇ ದೇವರು ಎನ್ನುತ್ತಿದ್ದಾರೆ. ಮತ್ತೊಬ್ಬರು ಇವರು ಇಬ್ಬರು ಅಲ್ಲ ನಿಜವಾದ ದೇವರು ಯೆಹೋವಾನೆ ಎಂದು ಹೇಳುತ್ತಿದ್ದಾರೆ. ಒಬ್ಬನೇ ತಂದೆ ಮೂವರು ಮಕ್ಕಳಿಗೆ ಒಬ್ಬರಿಗೆ ತಾತ ಎಂದು, ಒಬ್ಬರಿಗೆ ಚಿಕ್ಕಪ್ಪ ಎಂದು, ಒಬ್ಬರಿಗೆ ಬಂಧುವೆಂದು ತಿಳಿದಹಾಗೆ, ಒಬ್ಬನೇ ದೇವರು ಮೂರು ಮತದವರಿಗೆ ಮೂರು ಹೆಸರುಗಳಿಂದ ತಿಳಿಯುತ್ತಿದ್ದಾನೆ. ವಾಸ್ತವಾಗಿ ಮೂವರು ಮಕ್ಕಳು ಎಂದುಕೊಂಡ ಮೂರು ಹೆಸರುಗಳು ಅವರ ತಂದೆಗೆ ಹೇಗೆ ಅನ್ವಯಿಸುವುದಿಲ್ಲವೋ, ಹಾಗೆ ಮೂರು ಮತದವರು ಅಂದುಕೊಂಡ ವಿಧಾನಗಳು ದೇವರಿಗೆ ವರ್ತಿಸುವುದಿಲ್ಲ. ಏಕೆಂದರೆ ದೇವರಿಗೆ ರೂಪ, ಹೆಸರು, ಕೆಲಸ ಮೂರೂ ಇಲ್ಲ. ಆದ್ದರಿಂದ ದೇವರನ್ನು ರೂಪ, ನಾಮ, ಕ್ರಿಯಾ ರಹಿತನು ಎನ್ನುತ್ತಾರೆ. ಈ ಸತ್ಯವು ತಿಳಿಯದವರು ದೇವರು ಯಾವುದೋ ಒಂದು ರೂಪದಲ್ಲಿ ಇದ್ದಾನೆಂದು ಕೆಲವರು, ಯಾವುದೋ ಹೆಸರಿನಲ್ಲಿ ಇದ್ದಾನೆಂದು ಕೆಲವರು, ಯಾವುದೋ ಕೆಲಸ ಮಾಡುತ್ತಿದ್ದಾನೆಂದು ಕೆಲವರು ಎನ್ನುತ್ತಿದ್ದಾರೆ. ಅವರು ಅಂದುಕೊಂಡಿರುವುದು ಸತ್ಯವಲ್ಲ ಎಂದು ಅವರಿಗೆ ತಿಳಿಯದೆ ಹೋಗುವು ದರಿಂದ, ಅಸಲಾದ, ಸತ್ಯವಾದ ದೇವರನ್ನು ಮತದವರು ತಿಳಿಯದೆ ಇದ್ದಾರೆ. ಪ್ರಕೃತಿ ವಿಧಾನವನ್ನು, ಪರಮಾತ್ಮ ವಿಧಾನವನ್ನು ತಿಳಿದ ಯೋಗಿ ಆದವನು ಮತಗಳಿಗೆ ಅತೀತವಾದ ಜ್ಞಾನವನ್ನು ಹೇಳಿದರೂ ಕೆಲವರು ಗ್ರಹಿಸದೆ ಇದ್ದಾರೆ. ಯಾರಾದರೂ ಗ್ರಹಿಸಿಕೊಂಡು ಅಸಲಾದ ಸತ್ಯವನ್ನು ತಿಳಿದುಕೊಂಡರೆ ಅವರು ಸುಲಭವಾಗಿ ಮೋಕ್ಷವನ್ನು ಹೊಂದಬಲ್ಲರು.

ಯಾವುದಾದರೆ ಭೂಮಿ ಮೇಲೆ ಇದೆಯೋ ಅದೆಲ್ಲವೂ ಸೃಷ್ಟಿಸಲ್ಪಟ್ಟಿರುವುದೆ. ಭೂಮಿ, ಆಕಾಶ, ಮಧ್ಯದಲ್ಲಿನ ಗಾಳಿ, ಅಗ್ನಿ, ನೀರು ಇವುಗಳನ್ನು ಆಧಾರ ಮಾಡಿಕೊಂಡು ಜೀವಿಸುವ ಸಮಸ್ತ ಜೀವರಾಶಿಗಳು, ಸಮಸ್ತ ವಸ್ತುಗಳು, ಸಮಸ್ತ ವಾಹನಗಳು ಮೊದಲಾದವುಗಳೆಲ್ಲ

ಸೃಷ್ಠಿಸಲ್ಪಟ್ಟಿರುವವುಗಳೆ. ಸಮಸ್ತವನ್ನು ಸೃಷ್ಠಿಸಿದ ಸೃಷ್ಠಿಕರ್ತ ಒಬ್ಬನು ಇದ್ದಾನೆ. ಆತನೇ ದೇವರು. ಎಲ್ಲರೂ ದೇವರಿಂದ ಸೃಷ್ಠಿಸಲ್ಪಟ್ಟಿರುವವರೆ, ಆದರೂ ಸೃಷ್ಠಿಕರ್ತ ಹೇಗೆ ಇರುತ್ತಾನೋ ಯಾರಿಗೂ ತಿಳಿಯದು. ಯಾವಾಗಾದರೆ ನಾವು ಆತನಿಂದ ಸೃಷ್ಠಿಸಲ್ಪಟ್ಟಿದ್ದೇವೊ, ಆಗಲೇ ಆತನು ನಮಗೆಲ್ಲರಿಗೂ ತಂದೆ ಆಗಿದ್ದಾನೆ. ಆದ್ದರಿಂದ ಆತನನ್ನು ಜಗತ್ ಪಿತಾ ಎನ್ನಬಹುದು. ತಂದೆ ಎಂದರೆ ಕಾರಣವಾದವನು, ತಾಯಿ ಎಂದರೆ ಕಾರ್ಯವಾಗಿದೆ. ಎಲ್ಲರಿಗೂ ಎಲ್ಲದಕ್ಕೂ ಕಾರಣವಾದವನು ಮೊದಲು ಪ್ರಕೃತಿಯನ್ನು ಸೃಷ್ಠಿಸಿ, ಪ್ರಕೃತಿಯನ್ನು ಕಾರ್ಯವಾಗಿ ಮಾಡಿಕೊಂಡು ಸರ್ವವನ್ನು ಸೃಷ್ಟಿಸಿದ್ದಾನೆ. ಹುಟ್ಟಿದ ಮನುಷ್ಯನಿಗೆ ಚಿಕ್ಕಂದಿನಿಂದಲೂ ಪ್ರಕೃತಿ ಪಂಚಭೂತಗಳಾಗಿ ಕಾಣಿಸುತ್ತಲೇ ಇದೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಭಾಗಗಳ ಪ್ರಕೃತಿಯೆ "ಜಗತ್ ಮಾತ" ಎಂದು ಯಾರಿಗೂ ತಿಳಿಯದು. ಪ್ರಕೃತಿ ಕಾಣಿಸುತ್ತಿದ್ದರೂ, ಪ್ರಕೃತಿ ನಮ್ಮ ಶರೀರದಲ್ಲಿ ಗುಣ ರೂಪವಾದ ಮಾಯೆಯಾಗಿದ್ದು ಮನುಷ್ಯನನ್ನು ಪರ್ಯವೇಕ್ಷಿಸುತ್ತಾ, ತನ್ನ ಪತಿಯಾದ ಪರಮಾತ್ಮನಿಗೆ ಇಷ್ಟವಾದವರನ್ನೆ ದೇವರ ಕಡೆ ಹೋಗುವ ಹಾಗೆ ಮಾಡಿ, ಇಷ್ಟ ಇಲ್ಲದವರನ್ನು ದೈವ ಮಾರ್ಗದಲ್ಲಿ ಇದ್ದಹಾಗೆ ಭ್ರಮಿಸುವಂತೆ ಮಾಡಿ, ತನ್ನ ಮಾಯೆಯನ್ನು ದಾಟದಂತೆ ಮಾಡುತ್ತಿದೆ. ಪ್ರಕೃತಿ ಜನಿತವಾದ (ಪ್ರಕೃತಿಯಿಂದ ಹುಟ್ಟಿದ) ತ್ರಿ ಗುಣರೂಪವಾದ ಮಾಯೆಯನ್ನು ದೈವಜ್ಞಾನವಿಲ್ಲದ ಮನುಷ್ಯ ದಾಟಿಹೋಗಲಾರನು. ಮಾಯೆಯನ್ನು ದಾಟುವುದು ದುಸ್ಸಾಧ್ಯ. ಆದ್ದರಿಂದ ಜ್ಞಾನಿ ಆದ ಪೋತುಲೂರಿ ವೀರ ಬ್ರಹ್ಮಯ್ಯನವರು ತನ್ನ ತತ್ವದಲ್ಲಿ ತ್ರಿ ಗುಣ ರೂಪವಾದ ಮಾಯೆಯನ್ನು ಉದ್ದೇಶಿಸಿ "ಮೂರು ಕಾಲುವೆಗಳು ದಾಟಲಾರರಣ್ಣ, ಈ ಮೂಢ ಜನರು ಮೂರು ಕಾಲುವೆಗಳು ದಾಟಲಾರರಣ್ಣ" ಎನ್ನುವ ತತ್ವವನ್ನು ಹೇಳಿದ್ದಾನೆ.

ತಾಮಸ, ರಾಜಸ, ಸಾತ್ವಿಕ ಎನ್ನುವ ಮೂರು ಗುಣಗಳ ಸಮ್ಮೇಳನವಾದ ಮಾಯೆಯನ್ನು ಜಯಿಸಬೇಕಾದರೆ, ಮೊದಲು ಮನುಷ್ಯನಿಗೆ ದೈವ ಜ್ಞಾನವು

ತಿಳಿದು ದೇವರ ಧರ್ಮಗಳನ್ನು ಸಂಪೂರ್ಣವಾಗಿ ಗ್ರಹಿಸಿರಬೇಕು. ದೇವರ ಧರ್ಮಗಳನ್ನು ಸರಿಯಾಗಿ ತಿಳಿದುಕೊಳ್ಳದಿದ್ದರೂ, ಬೇರೆ ಭಾವದಲ್ಲಿ ಅರ್ಥಮಾಡಿಕೊಂಡರೂ ಧರ್ಮವು ಅಧರ್ಮವಾಗಿ ಅರ್ಥವಾಗಿ ಮಾಯೆಗೆ ಒಳ್ಳೆಯ ಅವಕಾಶ ಕೊಟ್ಟಹಾಗೆ ಆಗುತ್ತದೆ. ದೇವರ ಧರ್ಮಗಳಲ್ಲಿ ಯಾವುದೆ ಒಂದು ಸರಿಯಾಗಿ ತಿಳಿಯದೆ ಹೋದರೂ ಮನುಷ್ಯನನ್ನು ದೇವರ ಕಡೆ ಹೋಗಲು ಬಿಡದೆ, ತನಗೆ ತಿಳಿದಿದ್ದೆ ಧರ್ಮವೆಂದು ನಂಬಿಸಿ, ದೇವರಿಗೆ ದೂರವಾಗಿ ಕಳುಹಿಸುವುದು. ಯಾವ ಮನುಷ್ಯನಾದರೂ, ಎಂತಹ ದೊಡ್ಡ ಜ್ಞಾನಿ ಎಂದು ಹೆಸರು ಹೊಂದಿದ್ದರು, ದೇವರ ಧರ್ಮಗಳನ್ನು ಸರಿಯಾಗಿ ತಿಳಿಯದವನನ್ನು ತನ್ನ ಗೇಟಿನಿಂದ (ದ್ವಾರದಿಂದ) ಮಾಯೆ ಬಿಡುವುದಿಲ್ಲ. ಅಂತಹದರಲ್ಲಿ ತನ್ನ ಧರ್ಮಗಳು ಭೂಮಿಮೇಲೆ ಎಲ್ಲರಿಗೂ ತಿಳಿಯುವಹಾಗೆ ದೇವರು ಮೊದಲೆ ಸೃಷ್ಟ್ಯಾದಿಯಲ್ಲಿಯೇ ಹೇಳಿರುವನು. ದೇವರು ಆದಿಯಲ್ಲಿಯೆ ಹೇಳಿದ ತನ್ನ ಧರ್ಮಗಳನ್ನು ತಿಳಿಯುವುದು ಮನುಷ್ಯನ ಒಂದು ಇಷ್ಟಾಯಿಷ್ಟಗಳ ಮೇಲೆ ಆಧಾರಪಟ್ಟಿದೆ. ಪ್ರಪಂಚ ವಿಧಾನವೆಲ್ಲಾ, ಪ್ರಪಂಚ ಕಾರ್ಯಗಳೆಲ್ಲಾ ಮನುಷ್ಯನ ಕರ್ಮದ ಮೇಲೆ ಆಧಾರಪಟ್ಟು ನಡೆಯುತ್ತಿವೆ. ಅದರೆ ಒಂದು ದೈವ ಜ್ಞಾನವು ಮಾತ್ರ ಕರ್ಮಕ್ಕೆ ಅತೀತವಾಗಿರುವುದಾಗಿ, ಮನುಷ್ಯನ ಶ್ರದ್ಧೆ ಅಶ್ರದ್ಧೆಯ ಮೇಲೆ ಆಧಾರವಾಗಿದೆ. ಮನುಷ್ಯನಿಗೆ ದೈವಜ್ಞಾನದ ಮೇಲೆ ಎಷ್ಟು ಶ್ರದ್ಧೆ ಇದ್ದರೆ ಅಷ್ಟು ತಿಳಿದುಕೊಳ್ಳುವನು. ಆದ್ದರಿಂದ ಭಗವದ್ಗೀತೆಯಲ್ಲಿ ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ 39 ನೇ ಶ್ಲೋಕದಲ್ಲಿ "ಶ್ರದ್ಧಾವಾನ್ ಲಭತೇ ಜ್ಞಾನಮ್" ಎಂದು ಹೇಳಿರುವುದಿದೆ. ಮನುಷ್ಯರಿಗೆ ಅವರವರ ಶ್ರದ್ಧೆಯನ್ನನುಸರಿಸಿ ಜ್ಞಾನವು ಲಭಿಸುತ್ತದೆ, ಹಾಗೆ ಅವರವರ ಕರ್ಮಗಳನ್ನನುಸರಿಸಿ ಕಷ್ಟ ಸುಖಗಳು ಇರುವವು. **ಕರ್ಮಗಳನ್ನನುಸರಿಸಿ ಪ್ರಪಂಚ ಪ್ರಾಪ್ತಾ ಪ್ರಾಪ್ತಗಳು, ಶ್ರದ್ಧೆಯನ್ನನುಸರಿಸಿ ಧರ್ಮ ಅಧರ್ಮಗಳು ಲಭಿಸುವವೆಂದು ತಿಳಿಯುತ್ತಿದೆ.**

ಮನುಷ್ಯ ದೇವರನ್ನು ಸೇರುವುದಕ್ಕೆ ಬೇಕಾದ ಧರ್ಮಗಳೆಲ್ಲವನ್ನು ದೇವರೇ ಸೃಷ್ಟ್ಯಾದಿಯಲ್ಲಿಯೆ ತಿಳಿಸಿದರೂ, ಮನುಷ್ಯನ ಅಶ್ರದ್ಧೆಯಿಂದ ಅವು

ಕಾಲಕ್ರಮೇಣ ಅಧರ್ಮಗಳಾಗಿ ಬದಲಾಗಿವೆ. ಭಕ್ತಿ ಮತ್ತು ಆಧ್ಯಾತ್ಮಿಕ ವಿಧಾನದಲ್ಲಿ ಮನುಷ್ಯ ಧರ್ಮಗಳೆಂದುಕೊಂಡು ಅಧರ್ಮಗಳನ್ನಾಶ್ರಯಿಸಿದ್ದಾನೆ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! "ದೇವರು ಧರ್ಮಗಳನ್ನು ತಿಳಿಸಿದ್ದಾನೆ ಅಲ್ಲವೆ! ಅಧರ್ಮಗಳನ್ನು ಯಾರು ತಿಳಿಸಿದ್ದಾರೆ?" ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ದೇವರು ತಿಳಿಸಿದ ಧರ್ಮಗಳನ್ನು ಅರ್ಥ ಮಾಡಿಕೊಂಡರೆ ಅವು ಧರ್ಮಗಳಾಗಿಯೆ ಇರುತ್ತವೆ. ಒಂದು ವೇಳೆ ಮನುಷ್ಯನ ಅಶ್ರದ್ಧೆಯಿಂದ ಅವುಗಳನ್ನು ಅಪಾರ್ಥ ಮಾಡಿಕೊಂಡರೆ ಧರ್ಮಗಳೆ ಅಧರ್ಮಗಳಾಗಿ ಬದಲಾಗುತ್ತವೆ. ಅಧರ್ಮಗಳನ್ನು ಯಾರು ಸೃಷ್ಟಿಸಿಲ್ಲ. ಧರ್ಮಗಳಿಂದಲೇ ಅಧರ್ಮಗಳು ಬರುತ್ತಿವೆ. **ದೇವರು ಹೇಳಿಹೋದ ನಂತರ ಧರ್ಮಗಳನ್ನು ಕುರಿತು ಮತ್ತೆ ಹೇಳುವವರು ಇಲ್ಲದಿರುವಾಗ, ಮನುಷ್ಯತನ್ನ ಅಶ್ರದ್ಧೆಯಿಂದ ಧರ್ಮಗಳ ಪೂರ್ತಿ ವಿವರಣೆ ತಿಳಿದುಕೊಳ್ಳದಿದ್ದಾಗ, ಧರ್ಮಗಳೆ ಅಧರ್ಮಗಳಾಗಿ ಬದಲಾಗುತ್ತಿವೆ**. ನಂತರ ಬೋಧಿಸುವ ಬೋಧಕರಿಂದ ಅಧರ್ಮಗಳೆ ಪ್ರಚಾರವಾಗುತ್ತಿವೆ. ಆಗ ಧರ್ಮಗಳಿಗೆ ಹಾನಿ ಏರ್ಪಟ್ಟು, ಅಧರ್ಮಗಳು ಅಭಿವೃದ್ಧಿಯಾಗಿ ಹೋಗುತ್ತಿವೆ. ಅಂತಹ ಸಮಯದಲ್ಲಿ ದೇವರೇ ತನ್ನ ಧರ್ಮಗಳನ್ನು ಪುನಃ ಹೇಳಿ, ಅಧರ್ಮಗಳನ್ನು ಖಂಡಿಸಬೇಕಾಗುತ್ತದೆ. ದೇವರ ಧರ್ಮದ ಪ್ರಕಾರ ದೇವರು ಕೆಲಸ ಮಾಡದವನೆಂದು, ಕ್ರಿಯಾರಹಿತನೆಂದು ಹೇಳಿಕೊಂಡಿದ್ದೇವೆ. ಆದ್ದರಿಂದ ದೇವರು ಮನುಷ್ಯನಿಗೆ ಧರ್ಮಗಳನ್ನು ಕುರಿತು ತಿಳಿಸುವ ಅವಕಾಶವೇ ಇಲ್ಲ. ಆದರೆ ಹೇಗೆ ಅಧರ್ಮಗಳು ಅಡಗಿ ಹೋಗಿ ಧರ್ಮಗಳು ಮತ್ತೆ ಮೇಲೆ ಬರುವವು ಎನ್ನುವ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ.

ಅಧರ್ಮಗಳಾಗಿ ಬದಲಾಗಿರುವವುಗಳನ್ನು ತಿರುಗಿ ಧರ್ಮಗಳಾಗಿ ನೆಲಗೊಳಿಸಲು, ದೇವರು ಮೂರು ವಿಧಾನಗಳನ್ನು ಮೊದಲೇ ಏರ್ಪಾಟು ಮಾಡಿ ಇಟ್ಟಿದ್ದಾನೆ. ಸೃಷ್ಟಿಯನ್ನು ತಯಾರು ಮಾಡಿದಾಗಲೇ ಈ ಮೂರು ವಿಧಾನಗಳನ್ನು ಸಹ ತಯಾರು ಮಾಡಿಟ್ಟಿದ್ದಾನೆ. ದೇವರ ಧರ್ಮಗಳು ಏನೋ

ದೇವರಿಗೆ ಹೊರತು ಯಾರಿಗೂ ತಿಳಿಯದು. ಆದ್ದರಿಂದ ದೇವರ ವಿಧಾನಗಳನ್ನು (ಧರ್ಮಗಳನ್ನು) ಯಾವ ಮನುಷ್ಯನು ಹೇಳಲಾರನು. ಎಲ್ಲಾ ತಿಳಿದ ದೇವರು ಸಹ ತನ್ನ ಧರ್ಮಗಳನ್ನು ಯಾರಿಗೂ ಸ್ವತಃವಾಗಿ ಹೇಳುವುದಿಲ್ಲ. ಈಕಡೆ ಮನುಷ್ಯ ಹೇಳದೆ, ಆಕಡೆ ದೇವರೂ ಹೇಳದೆ ಹೋದರೆ ಧರ್ಮಗಳು ಹೇಗೆ ತಿಳಿಯುವವೆಂಬ ಅನುಮಾನವೂ ಬರಬಹುದು. ಅದಕ್ಕೆ ಉತ್ತರವಾಗಿ ದೇವರು ಧರ್ಮಗಳನ್ನು ತಿಳಿಸುವುದಕ್ಕೆ ಮೂರು ವಿಧಾನಗಳನ್ನು ನಿರ್ಣಯಿಸಿ ಇಟ್ಟಿದ್ದಾನೆಂದು ನಾವು ಮೊದಲೇ ಹೇಳಿಕೊಂಡಿದ್ದೇವೆ ಅಲ್ಲವೆ! ಅದರ ಪ್ರಕಾರ ಒಂದು ಭಗವಂತನಾಗಿ, ಎರಡು ಪ್ರವಕ್ತನಾಗಿ, ಮೂರು ಆದರಣ ಕರ್ತನಾಗಿ ಬಂದಿರುವವರು, ದೇವರ ಧರ್ಮಗಳನ್ನು ತಿಳಿಸುವ ಹಾಗೆ ದೇವರ ನಿರ್ಮಾಣವು ಇದೆ. ಈ ವಿಧವಾಗಿ ತಿಳಿಯದಂತೆ ಹೋದ ಧರ್ಮಗಳನ್ನು ಮತ್ತೆ ಯಥಾಸ್ಥಾನಕ್ಕೆ ತರಲು ದೇವರ ಅಂಶ ಮೂರು ವಿಧಗಳಾಗಿ ಬರಬೇಕಾಗಿದೆ. ದೇವರಿಗೆ ಲೆಕ್ಕವಿಲ್ಲದಷ್ಟು ಕೋಟಾನು ಕೋಟಿ ಅಂಶಗಳು ಇವೆ. ಅದರಲ್ಲಿ ಒಂದು ಅಂಶ ಮಾತ್ರ ಮೂರು ವಿಧಗಳಾಗಿ ಜನ್ಮಿಸಿ, ದೇವರ ಧರ್ಮಗಳನ್ನು ತಿಳಿಸುವುದು. ಒಂದು ಬಾರಿ ಭೂಮಿ ಮೇಲೆ ಧರ್ಮಗಳು ಪೂರ್ತಿ ಮಟ್ಟದಲ್ಲಿ ಮತ್ತೆ ಬರಬೇಕೆಂದರೆ ದೇವರ ಅಂಶ (ದೇವರಲ್ಲ) ಮೂರು ವಿಧಗಳಾಗಿ ಜನ್ಮಿಸಿ ಹೇಳ ಬೇಕಾಗಿರುತ್ತದೆ. ಪ್ರವಕ್ತ, ಭಗವಂತ, ಆದರಣ ಕರ್ತ ಎನ್ನುವವರು ಸಾಮಾನ್ಯ ಮನುಷ್ಯರಲ್ಲ. ಅವರು ದೇವರ ಅಂಶದಿಂದ ಕೂಡಿಕೊಂಡು ಹುಟ್ಟಿದವರು. ಇಲ್ಲಿಗೆ ನಮಗೆ ತಿಳಿದ ಸಮಾಚಾರದ ಪ್ರಕಾರ ಮೊದಲು ಭಗವಂತನು ಬಂದಿದ್ದಾನೆ. ನಂತರ ಪ್ರವಕ್ತ ಬಂದಿದ್ದಾನೆ, ಇನ್ನು ಆದರಣ ಕರ್ತನದೇ ಸರದಿ. ಭಗವಂತನ ನಂತರ ಮೂರು ಸಾವಿರ ವರ್ಷಗಳಿಗೆ ಪ್ರವಕ್ತ ಬಂದು, ನಂತರ ಆದರಣಕರ್ತ ಆಗಮನವು ಯಾವಾಗಲೋ ಹೇಳಲಾರೆವು. ಆದರಣ ಕರ್ತನಿಂದ ಸಂಪೂರ್ಣವಾಗಿ ದೇವರ ಧರ್ಮಗಳು ಪುನಃ ನೆಲೆಗೊಳ್ಳುತ್ತವೆ. ದೇವರ ಅಂಶ ಮೂರುಸಲ, ಮೂರು ಕಾಲಗಳಲ್ಲಿ, ಮೂವರು ಅಸಾಧಾರಣವಾದ ವ್ಯಕ್ತಿಗಳಾಗಿ, ಭೂಮಿ ಮೇಲೆ ಬರುತ್ತಿದೆಯೆಂದು ತಿಳಿಯುತ್ತಿದೆ.

ದೇವರು ಹುಟ್ಟದವನೇ ಆದರೂ ದೇವರು ಅಲ್ಲದ ದೇವರ ಶಕ್ತಿಯನ್ನು ಕೋಟ್ಯಾನು ಕೋಟಿ ಕ್ಯಾಲರಿಗಳಾಗಿ (ಭಾಗಗಳಾಗಿ) ವಿಭಜಿಸಿದರೆ ಅದರಲ್ಲಿ ಒಂದು ಕ್ಯಾಲರಿಶಕ್ತಿ (ಅಂಶ) ಮೂರು ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಪ್ರದೇಶಗಳಲ್ಲಿ, ಬೇರೆ ಬೇರೆ ಜಾತಿಗಳಲ್ಲಿ, ಬೇರೆ ಬೇರೆ ಹೆಸರುಗಳಲ್ಲಿ ಹುಟ್ಟುತ್ತಿದೆ. ಹಾಗೆ ಭಗವಂತನಾಗಿ, ಪ್ರವಕ್ತನಾಗಿ, ಆದರಣಕರ್ತನಾಗಿ ಹುಟ್ಟಿದ ದೈವಾಂಶ ಪೂರ್ತಿಯಾಗಿ ಧರ್ಮಗಳನ್ನು ಮತ್ತೆ ನೆಲಗೊಳಿಸಬಲ್ಲದು. ಭಗವಂತನಾಗಲಿ, ಪ್ರವಕ್ತನಾಗಲಿ, ಆದರಣಕರ್ತನಾಗಲಿ ಬಂದಾಗ ಅವರು ಸಾಧಾರಣ ಮನುಷ್ಯರು ಅಲ್ಲದಿದ್ದರೂ, ಅವರೂ ಸಹ ಎಲ್ಲರಹಾಗೆ ಜನ್ಮಿಸಿ ಶಿಶು ದಶೆಯಿಂದ ಬೆಳೆದು ಸಾಧಾರಣ ಮನುಷ್ಯರಹಾಗೆ ಬರುತ್ತಿದ್ದಾರೆ. ಅವರಿಗೂ ಸಹ ತಾಯಿ ತಂದೆಯರು ಪ್ರತಿ ಜನ್ಮದಲ್ಲು ಇದ್ದಾರೆ. ಇಲ್ಲಿ ನಿಮಗೆ ಬರದಿದ್ದರು ನನಗೆ ಒಂದು ಪ್ರಶ್ನೆ ಬಂದಿದೆ. ಅದೇನೆಂದರೆ! ಹುಟ್ಟಿದವರು ಸಾಧಾರಣ ಮನುಷ್ಯರಲ್ಲ ಅಲ್ಲವೆ! ಅವರು ದೇವರ ಅಂಶದಿಂದ ಹುಟ್ಟಿದವರು ಅಲ್ಲವೆ! ದೇವರೇ ಎಲ್ಲರಿಗೂ ತಂದೆ ಯಾಗಿರುವಾಗ ದೇವರ ಅಂಶಕ್ಕು ಸಹ ಅದೇ ಧರ್ಮವು ಅನ್ವಯಿಸುತ್ತದಲ್ಲವೆ! ಅಂತಹದರಲ್ಲಿ ಹುಟ್ಟಿದ ಭಗವಂತನಿಗಾಗಲಿ, ಹುಟ್ಟಿದ ಆದರಣ ಕರ್ತನಿಗಾಗಲಿ, ಹುಟ್ಟಿದ ಪ್ರವಕ್ತನಿಗಾಗಲಿ ಶರೀರ ತಾಯಿ ತಂದೆಯರು ಇರುತ್ತಾರಾ? ಅವರು ಶರೀರವನ್ನು ಧರಿಸಿ ಒಂದು ದಂಪತಿಗಳಿಗೆ ಹುಟ್ಟಿದಾಗ ಅವರಿಗೆ ಆ ದಂಪತಿಗಳು ತಾಯಿ ತಂದೆಯರೆ ಆಗುತ್ತಾರೆ ಅಲ್ಲವೆ! ಅಂತಹದರಲ್ಲಿ ತಂದೆ ಆದವನಿಗೇ ತಂದೆ ಇರುತ್ತಾನಾ? ಈ ಪ್ರಶ್ನೆಗಳು ನನ್ನವಾದರೂ, ಉತ್ತರ ಹೇಳಬೇಕಾಗಿರುವವನು ನನಗೆ ಹತ್ತಿರವಾಗಿ ಶರೀರದೊಳಗೇ ಇರುವ ನನ್ನ ಆತ್ಮ. ಈಗ ಏನು ಹೇಳುತ್ತಿದೆಯೋ ನೋಡೋಣ.

ದೈವವಾಗಲಿ, ದೈವಾಂಶವಾಗಲಿ ಒಂದೇ ಧರ್ಮವನ್ನು ಹೊಂದಿವೆ. ದೇವರು ದೇವರಾಗಿ ಇದ್ದರೂ, ಒಂದು ಅಂಶವಾಗಿ ಇದ್ದರೂ ತನ್ನ ಧರ್ಮವನ್ನು ಕಳೆದುಕೊಳ್ಳುವುದಿಲ್ಲ. ಆದ್ದರಿಂದ ತಂದೆ ಎಂದಿಗೂ ತಂದೆ ಯಾಗಿಯೇ

ಇರುವನು. ತಂದೆ ಎಂದಿಗೂ ತನ್ನ ಧರ್ಮವನ್ನು ಕಳೆದುಕೊಂಡು ಇತರರಿಗೆ ಯಾರಿಗೂ ಮಗನಾಗಿ ಇರುವುದಿಲ್ಲ. ಆದ್ದರಿಂದ ದೇವರ ಅಂಶವಾದ ಭಗವಂತನಿಗಾಗಲಿ, ಪ್ರವಕ್ತನಿಗಾಗಲಿ, ಆದರಣ ಕರ್ತನಿಗಾಗಲಿ ಶರೀರ ತಂದೆ ಇರುವುದಿಲ್ಲ. ಅವರು ಇತರ ಮನುಷ್ಯರಹಾಗೆ ತಂದೆ ವೀರ್ಯದಿಂದ ಹುಟ್ಟುವುದಿಲ್ಲ. ಅಷ್ಟೇ ಅಲ್ಲದೆ ತಾಯಿ ಗರ್ಭದಿಂದ ಎಲ್ಲರೂ ನಿರ್ಜೀವವಾಗಿ ಹುಟ್ಟಿದಹಾಗೆ ಹುಟ್ಟದೆ ಗರ್ಭದಿಂದ ಸಜೀವವಾಗಿ ಹುಟ್ಟುತ್ತಾರೆ. ಭೂಮಿ ಮೇಲಿರುವ ಸಾಧಾರಣ ಮನುಷ್ಯರೆಲ್ಲರೂ ತಂದೆ ವೀರ್ಯಕಣದಿಂದ, ತಾಯಿ ಅಂಡದಿಂದ ಹುಟ್ಟುತ್ತಿದ್ದಾರೆ. ಆದರೆ ದೇವರ ಅಂಶ ಹುಟ್ಟಿದಾಗ ಆತನ ಶರೀರವು ತಂದೆಯ ವೀರ್ಯದಿಂದಾಗಲಿ ತಾಯಿಯ ಅಂಡದಿಂದಾಗಲಿ ಸಂಬಂಧವಿಲ್ಲದೆ ಹುಟ್ಟುವುದು. ತಂದೆ ವೀರ್ಯದಿಂದ ಹುಟ್ಟದಿರುವಾಗ ಆತನಿಗೆ ತಂದೆ ಎನ್ನುವವನು ಇರುವುದಿಲ್ಲ. ಒಂದು ವೇಳೆ ಹಾಗೆ ಹುಟ್ಟಿದ ದೈವಾಂಶವನ್ನು ನಿನ್ನ ತಂದೆ ಯಾರು? ಎಂದು ಕೇಳಿದರೆ ಆತನು ಒಬ್ಬ ಮನುಷ್ಯನನ್ನು ತನ್ನ ತಂದೆ ಎಂದು ಹೇಳದೆ ದೇವರನ್ನೇ ತಂದೆ ಎಂದು ಹೇಳುವನು. ಇದರಿಂದ ಭಗವಂತನಿಗಾಗಲಿ, ಪ್ರವಕ್ತನಿಗಾಗಲಿ, ಆದರಣ ಕರ್ತನಿಗಾಗಲಿ ಶರೀರ ತಾಯಿ ತಂದೆಯರು ಇರುವುದಿಲ್ಲವೆಂದು ತಿಳಿಯುತ್ತಿದೆ. ಅಂತಹವರನ್ನು "ಸ್ವಯಂಭು" ಎನ್ನುತ್ತಾರೆ. ಸ್ವಯಂಭು ಎಂದರೆ ಸ್ವತಃವಾಗಿ ಹುಟ್ಟುವವನೆಂದು, ಅಥವಾ ತನಗೆ ತಾನು ಹುಟ್ಟಿದವನೆಂದು ಅರ್ಥ. ತಾಯಿ ತಂದೆ ಎನ್ನುವವರು ಸಾಧಾರಣ ಮನುಷ್ಯರಿಗೆ ಮಾತ್ರವೆ ಇರುತ್ತಾರೆಂದು, ಅಸಾಧಾರಣ ಭಗವಂತನಿಗಾಗಲಿ, ಪ್ರವಕ್ತನಿಗಾಗಲಿ, ಆದರಣ ಕರ್ತನಿಗಾಗಲಿ ಇರುವುದಿಲ್ಲವೆಂದು ತಿಳಿಯುತ್ತಿದೆ. ಸಾಮಾನ್ಯ ಮನುಷ್ಯರ ಶರೀರಗಳಿಗೆ ತಾತ್ಕಾಲಿಕ ತಾಯಿ ತಂದೆ ಇರುತ್ತಾರೆ. ಆದರೆ ಎಲ್ಲರಿಗೂ ಶಾಶ್ವತ ತಾಯಿ ತಂದೆಯರು ಪ್ರಕೃತಿ ಪರಮಾತ್ಮರೆಂದು ತಿಳಿಯಬೇಕು.

ಇಲ್ಲಿಯವರೆಗು ನಮಗೆ ತಿಳಿದ ಸಮಾಚಾರದಿಂದ ದ್ವಾಪರಯುಗದ ಕೊನೆಯಲ್ಲಿ ಭಗವಂತನೂ, ಕಲಿಯುಗದಲ್ಲಿ ಪ್ರವಕ್ತನೂ ಬಂದು ಹೋದ

ಹಾಗೆ ತಿಳಿದಿದೆ. ಪ್ರವಕ್ತ ಜನ್ಮ ಪತಿ ಸ್ಪರ್ಶವಿಲ್ಲದ ಕನ್ಯೆ ಗರ್ಭದಿಂದ ನಡೆದಿದೆ. ಆದ್ದರಿಂದ ಪ್ರವಕ್ತನಾಗಿ ಹುಟ್ಟಿದವನು ತಂದೆ ವೀರ್ಯದಿಂದ ಹುಟ್ಟಿಲ್ಲವೆಂದು ತಿಳಿಯುತ್ತಿದೆ. ಇನ್ನು ಭಗವಂತನಾದ ಶ್ರೀ ಕೃಷ್ಣನು ಹುಟ್ಟಿದಾಗ ವಸುದೇವನು, ದೇವಕೀದೇವಿ ತಾಯಿ ತಂದೆಯರಾಗಿ ಇದ್ದಾರಲ್ಲವೆ! ಎಂದು ಯಾರಿಗಾದರೂ ಅನುಮಾನ ಬರಬಹುದು. ಅಷ್ಟೇ ಅಲ್ಲದೆ ಶ್ರೀಕೃಷ್ಣನು ದೇವಕಿದೇವಿಗೆ ಅಷ್ಟಮ ಸಂತಾನ ತಾನೆ ಎಂದು ಸಹ ಕೇಳಬಹುದು. ಕೃಷ್ಣನು ಅಷ್ಟಮ ಸಂತಾನವಾದರೂ, ತಂದೆ ವೀರ್ಯ ಕಣದಿಂದ ಅಲ್ಲದೆ ಸ್ವತಃವಾಗಿ ಹುಟ್ಟಿದವನು, ಭಗವಂತನು. ಹಾಗೆಯೆ ತಾಯಿಯ ಅಂಡವು ಬಿಡುಗಡೆ ಆಗದ ಮುನ್ನವೇ ಏಳು ದಿನಗಳ ನಂತರ ದೇವಕೀದೇವಿ ಗರ್ಭವು ಧರಿಸಿದ ವಿಷಯವು ಯಾರಿಗೂ ತಿಳಿಯದು. ಕೃಷ್ಣನ ವೃಷಭಲಗ್ನ ಜಾತಕವನ್ನು (ಜಾಪಥಕವನ್ನು) ಅನುಸರಿಸಿ ತಾಯಿ ಮುಟ್ಟು (ಬಹಿಷ್ಠೆ) ನಂತರ ಏಳು ದಿನಗಳ, ಏಳು ಗಂಟೆಗಳಿಗೆ ಕೃಷ್ಣನ ಶರೀರವು ತಯಾರಾಗುವುದಕ್ಕೆ ಆರಂಭವಾಗಿದೆ ಎಂದು ಹೇಳಬಹುದು. ತಾಯಿ ಅಂಡವು 14 ದಿನಗಳ ನಂತರ ಬಿಡುಗಡೆ ಆಗುತ್ತದೆ. ಅಂಡವು ಬಿಡುಗಡೆ ಆಗದ ಮೊದಲೆ ಕೃಷ್ಣನ ಜನ್ಮ ಆರಂಭವಾಗಿದೆ. ಆದ್ದರಿಂದ ಕೃಷ್ಣನಿಗೆ ತಾಯಿ ತಂದೆಯರು ಇಲ್ಲವೆಂದು ಹೇಳಬಹುದು. ಕೃಷ್ಣನು ದೇವಕೀದೇವಿ ಗರ್ಭದಿಂದ ಹುಟ್ಟಿದರೂ, ಪ್ರಪಂಚ ದೃಷ್ಠಿಯಲ್ಲಿ ದೇವಕೀದೇವಿ ತಾಯಿಯೆಂದು ಹೇಳಿದರೂ, ತಂದೆಯೆಂದು ವಸುದೇವನನ್ನು ಹೇಳಿದರೂ, ಆತನು ದೇವರ ಅಂಶದಿಂದ ಹುಟ್ಟಿದವನಾದ್ದರಿಂದ ಆತನಿಗೆ ಶರೀರ ತಾಯಿ ತಂದೆಯರು ಇಲ್ಲ. ಹಾಗೆಯೆ ದೈವ ಧರ್ಮದ ಪ್ರಕಾರ ಕೃಷ್ಣನಿಗೆ ಆತ್ಮ ಸಂಬಂಧವಾದ ತಾಯಿ ತಂದೆಯರು ಸಹ ಇಲ್ಲ. ಧರ್ಮವನ್ನು ಅನುಸರಿಸಿ ನೋಡಿದರೆ ಆತನೆ ಎಲ್ಲರಿಗೂ ತಂದೆಯಾಗುವನು. ಪ್ರವಕ್ತನಿಗಾಗಲಿ, ಭಗವಂತನಿಗಾಗಲಿ, ಆದರಣಕರ್ತನಿಗಾಗಲಿ ಮೇಲೆ ಶರೀರ ತಾಯಿ ತಂದೆಯರಿದ್ದರೂ ವಾಸ್ತವಕ್ಕೆ ಅವರು ತಾಯಿ ತಂದೆಯರು ಅಲ್ಲವೆಂದು ಹೇಳಬೇಕು. ಹಾಗೆಯೆ ದೈವಜ್ಞಾನದ ಪ್ರಕಾರ ನಮಗೆಲ್ಲರಿಗೂ ತಂದೆ ಪರಲೋಕದಲ್ಲಿದ್ದಾನೆಂದು ಪ್ರವಕ್ತನಾಗಲಿ, ಭಗವಂತನಾಗಲಿ, ಆದರಣಕರ್ತನಾಗಲಿ ಮೇಲೆ ಮಾತನಾಡುತ್ತಾ ಹೇಳಿದರೂ, ಆ ಮಾತು ನಮಗೆ ಅನ್ವಯಿಸುತ್ತದೆ,

ಆದರೆ ಅವರಿಗೆ ಅನ್ವಯಿಸುವುದಿಲ್ಲ. ವಾಸ್ತವಕ್ಕೆ ಸೂತ್ರದ ಪ್ರಕಾರ ಅವರೇ ಜಗತ್ತಿಗೆ ತಂದೆಯಾದಾಗ, ಅವರಿಗೆ ತಂದೆ ಇದ್ದಾನೆನ್ನುವುದು ಅಸತ್ಯವಾಗುತ್ತದೆ. ಒಂದುವೇಳೆ ಪ್ರವಕ್ತ ನನ್ನ ತಂದೆ ಪರಲೋಕದಲ್ಲಿ ಇದ್ದಾನೆಂದು ಹೇಳಿದರೂ ಅದು ನಮಗೆ ಮಾರ್ಗದರ್ಶನಕ್ಕಾಗಿಯೇ ಹೊರತು ಬೇರೆ ಅಲ್ಲ. ಆದ್ದರಿಂದ ನಿಮ್ಮ ತಂದೆ ಪರಲೋಕದಲ್ಲಿದ್ದಾನೆಂದು ಒಂದು ಸಂದರ್ಭದಲ್ಲಿ ಆತನೇ ತಿಳಿಸಿದ್ದಾನೆ. ಒಟ್ಟಾರೆ **ದೇವರಿಗೆ ಆಗಲಿ, ದೇವರ ಒಂದು ಅಂಶಕ್ಕೆ ಆಗಲಿ, ಶರೀರ ತಾಯಿ ತಂದೆಯರಾಗಲಿ, ಆತ್ಮ ತಾಯಿ ತಂದೆಯರಾಗಲಿ ಇರುವುದಿಲ್ಲ.**

ಭೂಮಿ ಮೇಲೆ ಮನುಷ್ಯರಿಗೆ ಎರಡು ವಿಧಗಳ ತಾಯಿ ತಂದೆಯರಿದ್ದಾರೆನ್ನುವ ವಿಷಯವೇ ತಿಳಿಯದು. ಎರಡು ವಿಧಗಳ ತಾಯಿ ತಂದೆಯರ ಸಮಾಚಾರವು ಐದು ಸಾವಿರ ವರ್ಷಗಳ ಪೂರ್ವದಲ್ಲಿ ಭಗವಂತನಾಗಿ ಬಂದ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ನಂತರ ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಪ್ರವಕ್ತನಾಗಿ ಬಂದಿರುವ ಆತನು ಬೈಬಿಲ್‌ನಲ್ಲಿ ಹೇಳಿರುವುದು ನಡೆದಿದೆ. ಪ್ರಸ್ತುತ ಕಾಲದಲ್ಲಿ ನಾವು ಸಹ ಅನೇಕಬಾರಿ ಎರಡು ವಿಧಗಳ ತಾಯಿ ತಂದೆಯರನ್ನು ಕುರಿತು ಹೇಳಿರುವುದೇ ಅಲ್ಲದೆ ಈಗ ಚಿಕ್ಕ ಗ್ರಂಥವಾಗಿ **"ತಾಯಿ ತಂದೆ"** ಎಂದು ಹೆಸರಿಟ್ಟು ಬರೆಯುತ್ತಿದ್ದೇವೆ. ನಾವು ಹೇಳುವುದೆ ಅಲ್ಲದೆ ಬರುವ ಆದರಣಕರ್ತ ಸಹ ಈ ವಿಷಯವನ್ನೇ ಹೇಳುವನೆಂದು ಅಂದುಕೊಳ್ಳುತ್ತೇವೆ. ತಾಯಿ ತಂದೆ ಯಾರು ಎನ್ನುವ ವಿಷಯ ಪ್ರತಿ ಮನುಷ್ಯನಿಗೆ ಸಂಬಂಧಿಸಿದ ವಿಷಯ. ಪ್ರತಿ ಮನುಷ್ಯ ತಿಳಿದುಕೊಳ್ಳಬೇಕಾದ ವಿಷಯ. ಪ್ರತಿ ಮನುಷ್ಯ ತನ್ನ ಶರೀರ ತಾಯಿ ತಂದೆಯರನ್ನು, ತನ್ನ ತಾಯಿ ತಂದೆಯರೆಂದು ತಪ್ಪಾಗಿ ಅಂದುಕೊಳ್ಳುವುದು ನಡೆಯುತ್ತಿದೆ. ಆದ್ದರಿಂದ ತನಗೆ ಮೊದಲಿನಿಂದ ಇರುವ ತಾಯಿ ತಂದೆಯರನ್ನು ಕುರಿತು ಪೂರ್ತಿಯಾಗಿ ಮರೆತು ಹೋಗಿದ್ದಾನೆ. ತನ್ನ ಶಾಶ್ವತ ತಾಯಿ ತಂದೆಯರ ವಿಷಯವನ್ನು ತಿಳಿದುಕೊಳ್ಳಲು ಪ್ರಯತ್ನ ಮಾಡಿದರೆ, ಅದೇ ಆಧ್ಯಾತ್ಮಿಕವಾಗುತ್ತದೆ. ಆಧ್ಯಾತ್ಮಿಕವೆಂದರೂ, ಜ್ಞಾನ ಮಾರ್ಗವೆಂದರೂ ಅದು ತನ್ನ ತಾಯಿ ತಂದೆಯರ

ಕುರಿತು ತಿಳಿದುಕೊಳ್ಳುವುದೇ ಹೊರತು ಬೇರೆ ಅಲ್ಲ. ಕಾಣಿಸುವ ತಾಯಿ ತಂದೆಯರು ಎಲ್ಲರಿಗೂ ತಿಳಿದಿದೆ, ಆದರೆ ಕಾಣಿಸದ ತಾಯಿ ತಂದೆಯರು ಬಹುಶಃ ಯಾರಿಗೂ ತಿಳಿಯದವರು. **ತಿಳಿಯದ ತಾಯಿ ತಂದೆಯರನ್ನು ತಿಳಿಯುವುದೇ ಜೀವನದ ಸಾಫಲ್ಯ.**

ತಾಯಿ ಅಂದರೆ ಕಾರ್ಯವಾಗಿದೆ, ತಂದೆ ಅಂದರೆ ಕಾರಣವಾದವನು ಎಂದು ಅರ್ಥ ಹೇಳಿಕೊಂಡಿದ್ದೇವೆ. ಹಾಗೆಯೇ ಜನನಿ ಅಂದರೆ ಹುಟ್ಟಿಸುವುದು, ಜನಕ ಅಂದರೆ ಹುಟ್ಟುವ ಹಾಗೆ ಮಾಡುವವನು. **ಮಾತಾ** ಅಂದರೆ ನಿನ್ನನ್ನು ಪೋಷಿಸುವುದು, **ಪಿತಾ** ಅಂದರೆ ಎಲ್ಲರನ್ನು ಪೋಷಿಸುವಂತೆ ಹೇಳಿದವನು. ಈ ವಿಧವಾಗಿ ತಾಯಿ ತಂದೆ ಅಂದರೂ, ಜನನಿ ಜನಕ ಅಂದರೂ, ಮಾತಾ ಪಿತಾ ಅಂದರೂ ಆತ್ಮಸಂಬಂಧ ಅರ್ಥವನ್ನೆ ಕೊಡುತ್ತವೆ. ಶರೀರ ಸಂಬಂಧ ಅರ್ಥವು ಈಗ ಹೇಳಿಕೊಂಡ ಯಾವ ಪದದಲ್ಲಿಯೂ ಇಲ್ಲ. ಆದರೆ ಇಲ್ಲಿಯವರೆಗು ನಮ್ಮ ಪುರಾಣಗಳಲ್ಲಾಗಲಿ, ಕೆಲವರು ಸ್ವಾಮಿಗಳು ಹೇಳುವು ದರಲ್ಲಾಗಲಿ, ದೇವತೆಗಳ ಕಥೆಗಳಲ್ಲಾಗಲಿ, ಹೆಚ್ಚಿನದಾಗಿ ಶರೀರ ತಾಯಿ ತಂದೆಯರ ಪ್ರಸ್ಥಾವನೆಯೆ ಬಂದಿದೆ. ಒಬ್ಬ ಮನುಷ್ಯ ಜನ್ಮಿಸುವುದಕ್ಕೆ ಕಾರ್ಯ ಕಾರಣವಾದ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರನ್ನು ಕುರಿತು ಎಲ್ಲಿಯು ಯಾರೂ ಹೇಳಲಿಲ್ಲ. ಆದ್ದರಿಂದ ಎಲ್ಲರಿಗೂ ಶರೀರ ತಾಯಿ ತಂದೆಯರು ಹೊರತು, ಆತ್ಮ ಸಂಬಂಧ ತಾಯಿ ತಂದೆಯರು ತಿಳಿಯದು. **ನಮ್ಮ ಪುರಾಣಗಳು, ಶರೀರ ತಾಯಿ ತಂದೆಯರ ಮೇಲೆ ಭಕ್ತಿ ಬೆಳೆಸಿವೆ ಅಷ್ಟೆ, ತಿಳಿಯದ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರ ಮೇಲೆ ಭಕ್ತಿಯನ್ನು ಬೆಳೆಸಿಲ್ಲ. ಈಗ ಪುರಾಣಗಳಿಗೂ, ವೇದಗಳಿಗೂ ಅತೀತವಾಗಿರುವ ಜ್ಞಾನದಿಂದ ಶಾಶ್ವತವಾದ ತಾಯಿ ತಂದೆಯರ ಕುರಿತು ತಿಳಿದುಕೊಳ್ಳಲು ಪ್ರಯತ್ನಿಸೋಣ.** ಸರ್ವಜಗತ್ತಿಗೂ ಆಕಾರವನ್ನು ಕೊಟ್ಟ ಪ್ರಕೃತಿ ಮಾತೆಯನ್ನು, ಸರ್ವಜಗತ್ತು ಸೃಷ್ಟಿಗೆ ಕಾರಣವಾದ ತಂದೆ ಪರಮಾತ್ಮನನ್ನು ಕುರಿತು ತಿಳಿಯುವುದರಿಂದ ನಮಗೆ ಬರುವ ಲಾಭವೇನು? ಎಂದು ಯೋಚಿಸಿದರೆ, ಅವರಿಂದ ಬರುವ ಲಾಭವು ಅಪಾರವಾದದ್ದೆಂದು

ಹೇಳಬಹುದು. ಹಾಗೆ ಶರೀರ ತಾಯಿ ತಂದೆಯರಿಂದ ಏನು ಬರುತ್ತದೋ ಸ್ವಲ್ಪ ವಿವರಿಸಿಕೊಳ್ಳೋಣ.

ಶರೀರವನ್ನು ಧರಿಸಿ ಹುಟ್ಟಿದಾಗ ಮೊದಲು ಆಹಾರವನ್ನು ಹಾಲಿನ ರೂಪದಲ್ಲಿ ಕೊಟ್ಟು ಪೋಷಿಸುವುದು ತಾಯಿಯೆ. ಆದ್ದರಿಂದ ಪ್ರತಿ ಮಗುವಿಗು ತಾಯಿ ಮೊದಲು ತಿಳಿಯುತ್ತಾಳೆ. ಶಿಶು ದಶೆಯಲ್ಲಿ ತಂದೆ ವಿಷಯವೆ ಮಗುವಿಗೆ ತಿಳಿಯದು. ಆ ದಶೆಯಲ್ಲಿ ಮಗುವಿಗೆ ಅತ್ಯಂತ ಸನ್ನಿಹಿತಳು ತಾಯಿಯೆ. ತಾಯಿ ಅಲ್ಲದೆ ಯಾರೂ ತಿಳಿಯದ ಸ್ಥಿತಿಯಿಂದ ಸ್ವಲ್ಪ ಬೆಳೆದ ನಂತರ ಮತ್ತೆ ಕೆಲವರ ಪರಿಚಯ ಏರ್ಪಟ್ಟರೂ ಆಗಲೂ ಸಹ ಇವನೇ ನನ್ನ ತಂದೆಯೆಂದು ತಿಳಿಯದು. ಶಿಶು ದಶೆಯಿಂದ ಬಾಲ್ಯ ದಶೆಗೆ ಬಂದ ನಂತರ ಈತನು ತಂದೆ ಎಂದು ತಿಳಿಯಬಲ್ಲದು. ಈ ವಿಧವಾಗಿ ಚಿಕ್ಕಂದಿನಿಂದಲೇ ತಾಯಿ ಮೊದಲು, ನಂತರ ತಂದೆ ತಿಳಿದು ಬರುತ್ತಾರೆ. ಚಿಕ್ಕ ವಯಸ್ಸಿನಲ್ಲಿ ತಾಯಿಗೆ ಹೆಚ್ಚು ಹತ್ತಿರದಲ್ಲಿ ಇದ್ದ ಮನುಷ್ಯ, ಯುಕ್ತ ವಯಸ್ಸಿನಿಂದ ತಂದೆಗೆ ಹೆಚ್ಚಿನ ಪ್ರಾಧಾನ್ಯತೆ ಕೊಡುತ್ತಾ ಬರುವನು. ಮೂವತ್ತು ಅಥವಾ ನಲವತ್ತು ವರ್ಷಗಳ ವಯಸ್ಸಿನಿಂದ ತಾಯಿಗಿಂತ ತಂದೆಗೆ ಪೂರ್ತಿ ಹತ್ತಿರವಾಗಿ ಹೋಗುವನು. ಚಿಕ್ಕ ವಯಸ್ಸಿನಲ್ಲಿ ತಾಯಿ ಎಲ್ಲ ವಿಧದಲ್ಲಿ ಪೋಷಿಸಿದರೂ, ತಂದೆ ದೂರವಾಗಿ ಇದ್ದರೂ, ದೊಡ್ಡವನಾದಾಗ ಮಾತ್ರ ತಾಯಿಯನ್ನು ದೂರಮಾಡಿ ತಂದೆಗೆ ಹತ್ತಿರವಾಗುವುದು ಸಹಜವಾಗಿ ನಡೆಯುತ್ತಿದೆ. ಮನುಷ್ಯ ಜೀವನದಲ್ಲಿ ಮೊದಲು ತಾಯಿಗೆ, ನಂತರ ತಂದೆಗೆ ಪ್ರಾಧಾನ್ಯತೆ ಇದ್ದರೂ, ಕೆಲವರು ಮಾತ್ರ ತಮ್ಮ ಜೀವನದಲ್ಲಿ ತಂದೆಗಿಂತ ತಾಯಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಡುವವರು ಸಹ ಇದ್ದಾರೆ. ಯಾರು ಹೇಗೆ ಇದ್ದರೂ ಅವರು ಶರೀರ ತಾಯಿ ತಂದೆಯರಿಗೆ ಹತ್ತಿರವಾಗಿ ಇದ್ದಾರೆಂದು, ಅವರನ್ನು ಕುರಿತೇ ತಿಳಿದುಕೊಂಡಿದ್ದಾರೆಂದು ಹೇಳಬಹುದು. ಶರೀರ ತಾಯಿ ತಂದೆಯರನ್ನು ಗೌರವದಿಂದ ಕಾಣುತ್ತಾ ಅವರನ್ನು ಪೋಷಿಸಿದರೆ, ಅದರಿಂದ ಬರುವ ಫಲಿತವು ಪುಣ್ಯ. ಹಾಗೆಯೆ ಅವರನ್ನು ಅಗೌರವದಿಂದ ನೋಡಿ

ದೂಷಿಸಿದರೆ, ಅದರಿಂದ ತಪ್ಪದೆ ಪಾಪವು ಬಂದೇಬರುತ್ತದೆ. ಈ ವಿಧವಾಗಿ ಭೌತಿಕ ತಾಯಿ ತಂದೆಯರ ಬಗ್ಗೆ ಮನುಷ್ಯನ ಪ್ರವರ್ತನೆಯನ್ನನುಸರಿಸಿ ಪಾಪ ಪುಣ್ಯಗಳು ಬರುತ್ತವೆ. ಪಾಪ ಪುಣ್ಯಗಳನ್ನು ಸೇರಿಸಿ ಕರ್ಮ ಎನ್ನುತ್ತಿದ್ದೇವೆ. ಮನುಷ್ಯನಿಗೆ ಸಂಭವಿಸಿದ ಯಾವ ಕರ್ಮವನ್ನಾದರೂ ಮನುಷ್ಯ ಅನುಭವಿಸಲೇಬೇಕಾಗಿದೆ. ಹಾಗೆ ಒಂದು ಜನ್ಮದಲ್ಲಿ ಮಾಡಿಕೊಂಡ ಕರ್ಮವನ್ನು ನಂತರ ಜನ್ಮಗಳಲ್ಲಿ ಅನುಭವಿಸಬೇಕಾಗಿದೆ. ಕರ್ಮವನ್ನು ಅನುಭವಿಸುವುದಕ್ಕೆ ಜನ್ಮಗಳು ಬರುತ್ತಿವೆ. ಒಟ್ಟಾರೆ ಭೌತಿಕ ತಾಯಿ ತಂದೆಯರಿಂದ ಪಾಪ ಪುಣ್ಯಗಳು ಸಂಭವಿಸುವುದೂ, ಅವುಗಳನ್ನು ಅನುಭವಿಸುವುದಕ್ಕೆ ಜನ್ಮಿಸುವುದೂ ನಡೆಯುತ್ತಿದೆ. ಶರೀರ ತಾಯಿ ತಂದೆಯರಿಂದ ಜನ್ಮಗಳಿಂದ ಹೊರಬೀಳದೆ ಜನ್ಮಗಳಲ್ಲಿಯೇ ಮನುಷ್ಯ ಸಿಲುಕಿಕೊಂಡು ಹೋಗುತ್ತಿದ್ದಾನೆ. **ಭೌತಿಕ ಸಂಬಂಧವಾದ ತಾಯಿ ತಂದೆಯರಿಂದ ಜನ್ಮ ಸಾಹಿತ್ಯವೆಂಬ ನಷ್ಟವೆ ಬರುತ್ತದಾಗಲಿ, ಜನ್ಮ ರಾಹಿತ್ಯವಾದ ಲಾಭ ಬರುತ್ತಿಲ್ಲ.**

ಆತ್ಮ ಸಂಬಂಧ ತಾಯಿ ತಂದೆಯರಾದ ಪ್ರಕೃತಿ ಪರಮಾತ್ಮರನ್ನು ಮನುಷ್ಯ ಜೀವನದಲ್ಲಿ ಎಲ್ಲಿಯವರೆಗೆ ತಿಳಿದುಕೊಂಡಿದ್ದಾನೆಂದು ಯೋಚಿಸಿದರೆ, ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗೂ ಪ್ರಕೃತಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಪಂಚಭೂತಗಳಾಗಿ ಎಲ್ಲರಿಗೂ ತಿಳಿಯುತ್ತಿದೆ. ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ನಮ್ಮ ಶರೀರದೊಳಗೇ ಇವೆಯೆಂದು, ಅವುಗಳಿಂದಲೇ ನಮ್ಮ ಶರೀರ ನಿರ್ಮಾಣವಾಗಿದೆಯೆಂದು ಬಹಳ ಜನಕ್ಕೆ ತಿಳಿಯದು. ಪಂಚಭೂತಗಳಾದ ಪ್ರಕೃತಿಯಿಂದಲೇ ಶರೀರವು ತಯಾರಾಗಿ ಒಂದು ಆಕಾರವನ್ನು ಹೊಂದಿದೆಯೆಂದು, ಒಂದು ಆಕಾರವಿರುವ ಶರೀರವನ್ನು ತಯಾರುಮಾಡಿ ಇಟ್ಟಿರುವುದೆ ತಾಯಿಯೆಂದು, ಆ ವಿಧವಾಗಿ ಪ್ರಕೃತಿ ಸರ್ವಮಾನವರಿಗು ತಾಯಿಯೆಂದು ತಿಳಿಯುತ್ತಿದೆ. ಚಿಕ್ಕ ವಯಸ್ಸಿನಲ್ಲಿ ಭೌತಿಕ ತಾಯಿಗೆ ಮನುಷ್ಯ ಹತ್ತಿರ ಇದ್ದಹಾಗೆ, ಪ್ರತಿ ಮನುಷ್ಯ ಆತನಿಗೆ ತಿಳಿಯದೇ ಪ್ರಕೃತಿಗೆ ಹತ್ತಿರವಾಗಿದ್ದಾನೆ. ಕಾಣಿಸುವುದು, ಕೇಳಿಸುವುದು ಐದು

ಇಂದ್ರಿಯಗಳಿಗೆ ತಿಳಿಯುವುದೆಲ್ಲಾ ಪ್ರಕೃತಿಯೆ ಆಗಿರುವಾಗ, ಪ್ರತಿ ಮನುಷ್ಯ ಪ್ರಕೃತಿಗೆ ಹತ್ತಿರದಲ್ಲಿಯೇ ಇದ್ದಾನೆಂದು ಹೇಳಬಹುದು. ಆದರೆ ಪ್ರಕೃತಿ ತನಗೆ ಶರೀರವನ್ನು ಕೊಟ್ಟ ತಾಯಿಯೆಂದು ಯಾರಿಗೂ ತಿಳಿಯದು. ಒಬ್ಬ ಮನುಷ್ಯ ಬೆಳೆದು ದೊಡ್ಡವನಾದ ನಂತರ ಭೌತಿಕ ತಾಯಿಗಿಂತ ತಂದೆಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟಹಾಗೆ, ಮನುಷ್ಯ ತನ್ನ ಜೀವನದಲ್ಲಿ ದೊಡ್ಡ ವಯಸ್ಸು ಬಂದ ನಂತರ, ತನ್ನ ತಂದೆ ಪರಮಾತ್ಮ ಎಂದು ತಿಳಿಯದೆ ಹೋಗುವುದರಿಂದ, ಪರಮಾತ್ಮನಿಗೆ ಪ್ರಾಧಾನ್ಯತೆ ಕೊಡುವುದಿಲ್ಲ. ಪ್ರಕೃತಿ ತಾಯಿ ಎಂದಾಗಲಿ, ಪರಮಾತ್ಮ ತಂದೆ ಎಂದಾಗಲಿ ಎಷ್ಟು ವಯಸ್ಸು ಬಂದರೂ ತಿಳಿಯದೆ ಹೋಗುತ್ತಿದ್ದಾನೆ. ಈ ವಿಧವಾಗಿ ಭೂಮಿ ಮೇಲೆ 90% ರಷ್ಟು ಪ್ರಜೆಗಳು ಜೀವಾತ್ಮ ಆದ ತನಗೆ ತಾಯಿ ಯಾರೋ, ತಂದೆ ಯಾರೋ ತಿಳಿಯದ ಸ್ಥಿತಿಯಲ್ಲಿ ಇದ್ದಾರೆ. ಶಾಶ್ವತವಾದ, ಸತ್ಯವಾದ ತಾಯಿ ತಂದೆಯರು ತಿಳಿಯಬೇಕೆಂದರೆ, ಅವರಿಗೆ ಸಂಬಂಧಿಸಿದ ಸಮಾಚಾರ ಮನುಷ್ಯನಿಗೆ ತಿಳಿದಿರಬೇಕು. ಆ ಸಮಾಚಾರವನ್ನು ದೈವಜ್ಞಾನ ಎನ್ನುತ್ತೇವೆ. **ಭೂಮಿ ಮೇಲೆ ದೈವಜ್ಞಾನವು ತಿಳಿಯದ ಮನುಷ್ಯ ಯಾರಾದರಾಗಲಿ, ಅವರಿಗೆ ಶಾಶ್ವತವಾದ ತಾಯಿ ತಂದೆಯರು ತಿಳಿದಿಲ್ಲ.** ಇಂದಿನ ಸಮಾಜದಲ್ಲಿ ದೈವಜ್ಞಾನವೆಂದರೇನೆ ಸಣ್ಣ ದೃಷ್ಟಿಯಿಂದ ನೋಡುವ ಮನುಷ್ಯರಿದ್ದಾರೆ. ದೈವಜ್ಞಾನಿ ಎಂದರೆ ಅವನನ್ನು ಅಸಮರ್ಥನೆಂದು ಲೆಕ್ಕಿಸುವವರಿದ್ದಾರೆ. ಅಂತಹ ಸಮಾಜದಲ್ಲಿ ಯಾರಿಗೂ ದೈವಜ್ಞಾನದ ಮೇಲೆ ಆಸಕ್ತಿ ಇಲ್ಲದೆ ಹೋಗಿದೆ. ಆದ್ದರಿಂದ ಯಾರಿಗೂ ದೇವರ ಜ್ಞಾನವೆಂದರೆ ಏನೋ, ಮಾಯೆ ಪ್ರಭಾವವೆಂದರೆ ಏನೋ ತಿಳಿಯದೆ ಹೋಗಿದೆ. ಭೂಮಿ ಮೇಲೆ ಎಷ್ಟು ಮತಗಳಿದ್ದರೂ, ಆ ಮತದಲ್ಲಿನ ಸ್ವಾಮಿಗಳು, ಬೋಧಕರು, ಗುರುಗಳು ಇದ್ದರೂ ಅವರು ಮತಕ್ಕೆ ಪ್ರಾಧಾನ್ಯತೆ ಕೊಡುತ್ತಿದ್ದಾರೆ. ಗಡಿಗೆ ಸಾಂಬಾರಿಗೆ ಚಿಕ್ಕ ಚೌಟಿನಿಂದ ಒಗ್ಗರಣೆ ಇಟ್ಟಹಾಗೆ ಅವರ ಬೋಧನೆಯಲ್ಲಿ ನಾಮ ಮಾತ್ರ ದೈವಜ್ಞಾನವಿರುತ್ತದೆ. ಕೆಲವರು ಆ ಸ್ವಲ್ಪ ಜ್ಞಾನವನ್ನು ಸಹ ಗ್ರಹಿಸದೆ, ಮತ ವಿಧಾನಗಳಿಗೆ ಹೆಚ್ಚಿನ ಬೆಲೆ ಕೊಡುವುದರಿಂದ ದೇವರ ವಿಧಾನವು

ಏನೋ ತಿಳಿಯದೇ ಹೋಗಿದೆ. ಸ್ವಲ್ಪ ದೇವರ ಜ್ಞಾನವನ್ನು ತಿಳಿದವರು ಅಪರೂಪವಾಗಿ ಇದ್ದಾರೆ. ಅವರು ದೇವರನ್ನು ತಂದೆಯೆಂದು ಒಪ್ಪಿಕೊಳ್ಳುತ್ತಿದ್ದಾರೆ. ಆದರೆ ಪ್ರಕೃತಿ ಅಂದರೆ ಏನೋ, ಪ್ರಕೃತಿಯಿಂದ ಹುಟ್ಟಿದ ಮಾಯೆ ಅಂದರೆ ಏನೋ, ಮಾಯೆ ಮನುಷ್ಯನ ಶರೀರದಲ್ಲಿ ಎಲ್ಲಿದೆಯೋ, ಯಾವ ರೂಪದಲ್ಲಿದೆಯೋ, ಮನುಷ್ಯನಲ್ಲಿನ ಮಾಯೆ ಮನುಷ್ಯನನ್ನು ಹೇಗೆ ಮೋಸ ಗೊಳಿಸುತ್ತದೊ ತಿಳಿಯದಂತಿದ್ದಾರೆ. ನಾವು ದೇವರನ್ನು ವಿಶ್ವಾಸಿಸುತ್ತೇವೆಂದು ಹೇಳುವವರು, ದೇವರನ್ನು ತಂದೆ ಎಂದು ಹೇಳುವವರು, ನಮ್ಮ ಮತದಲ್ಲಿಯೆ ಹೊರತು ಇತರೆ ಮತಗಳಲ್ಲಿ ದೇವರನ್ನು ವಿಶ್ವಸಿಸುವವರು ಕಡಿಮೆ ಇದ್ದಾರೆಂದು ಎಂದುಕೊಳ್ಳುವವರು ಬಹಳ ಜನ ಇದ್ದರೂ, ಅವರು ತಂದೆಯನ್ನು ಮಾತ್ರ ಹೇಳುತ್ತಿದ್ದಾರಾಗಲಿ, ತಾಯಿಯನ್ನು ಕುರಿತು ತಿಳಿಯದವರೆಂದೇ ಹೇಳಬಹುದು. ತಾಯಿಯನ್ನು ಕುರಿತು ತಿಳಿಯದೇ ತಂದೆಯನ್ನು ಯಾರು ತಿಳಿಯಲಾರರು. ಏಕೆಂದರೆ ತಂದೆ ಯಾರೆನ್ನುವುದು ತಾಯಿಗೆ ಮಾತ್ರವೆ ತಿಳಿಯುವುದು. ದೇವರು ಯಾರೆನ್ನುವುದು ಮಾಯೆ ರೂಪದಲ್ಲಿರುವ ಪ್ರಕೃತಿಗೆ ಮಾತ್ರವೆ ತಿಳಿಯುವುದು. ಆದ್ದರಿಂದ ಪ್ರಕೃತಿಯಿಂದ ತಯಾರಾದ ಶರೀರದೊಳಗಿನ ಗುಣರೂಪವಾದ ಮಾಯೆಯನ್ನು ತಿಳಿದು, ಶರೀರದಲ್ಲಿ ತಾನು ಯಾರೋ, ಎಲ್ಲಿದ್ದಾನೋ, ಏನುಮಾಡುತ್ತಿದ್ದಾನೋ ತಿಳಿಯಬೇಕು. ಅಷ್ಟೇ ಅಲ್ಲದೆ ಶರೀರದಲ್ಲಿ ನಡೆಯುವ ಕೆಲಸಗಳು ಯಾರು ಮಾಡುತ್ತಿದ್ದಾರೋ, ಶರೀರದ ಹೊರಗೆ ಶರೀರದಿಂದ ನಡೆಯುವ ಕೆಲಸಗಳು ಯಾರು ಮಾಡುತ್ತಿದ್ದಾರೋ, ಎಲ್ಲಾ ಜ್ಞಾನರೂಪವಾಗಿ ತಿಳಿಯಬೇಕು. ಶರೀರ ಯಂತ್ರಾಂಗವನ್ನೆಲ್ಲ ತಿಳಿದಾಗಲೇ, ತಾಯಿ ಆದ ಪ್ರಕೃತಿ ಹೇಗಿದೆಯೋ ತಿಳಿಯುವುದು. ನಂತರ ತಂದೆ ಆದ ಪರಮಾತ್ಮ ಹೇಗಿರುವನೆಂದು ತಿಳಿಯುವುದಕ್ಕೆ ಅವಕಾಶ ಏರ್ಪಡುತ್ತದೆ. ಪ್ರಪಂಚದಲ್ಲಿ ಭೌತಿಕ ತಂದೆಯನ್ನು, ತಾಯಿ ಇಲ್ಲದೆ ಹೇಗೆ ತಿಳಿಯುವುದಿಲ್ಲವೋ ಹಾಗೆ **ಅಭೌತಿಕವಾದ ಪರಮಾತ್ಮನನ್ನು, ಮಾಯೆಯನ್ನು ಕುರಿತು ತಿಳಿಯದೆ ತಿಳಿಯಲಾರೆವು. ಅಭೌತಿಕವಾದ ತಾಯಿ ತಂದೆಯರನ್ನು ತಿಳಿದುಕೊಂಡಾಗ ನಂತರ ಭೌತಿಕ**

**ತಾಯಿ ತಂದೆಯರಿಗೆ ಹುಟ್ಟುವುದಿಲ್ಲ. ನಂತರ ಶರೀರವನ್ನು ಧರಿಸಿ ಜನ್ಮಿಸುವುದಂತೂ ಇರುವುದಿಲ್ಲ.** ಯಾರಾದರೆ ತಾಯಿಯನ್ನು ತಿಳಿಯುವನೋ ಆತನು ತಾಯಿ ಮುಖಾಂತರ ತಂದೆ ಹತ್ತಿರಕ್ಕೆ ಸೇರಿ ಹೋಗುವನು. ಪರಲೋಕದಲ್ಲಿರುವ ತಂದೆ ಬಳಿಗೆ ಸೇರುವುದಕ್ಕೆ ತಾಯಿ ಮುಖಾಂತರವೆ ಸಾಧ್ಯವಾಗುತ್ತದೆ. ತಾಯಿಯನ್ನು ವಿಸ್ಮರಿಸಿದವನು ತಂದೆಯನ್ನು ನೋಡಲಾರನು. ತಾಯಿ ತಂದೆಯನ್ನು ತಿಳಿದವನು ಇನ್ನು ಎಲ್ಲಿಯೂ ಜನ್ಮಿಸುವುದಿಲ್ಲ. ಅಲ್ಲಿಗೆ ಜನ್ಮ ರಾಹಿತ್ಯ ಉಂಟಾಗುತ್ತಿದೆ. ಅದೇ ಮೋಕ್ಷ ಅಥವಾ ಮುಕ್ತಿ. ಎಲ್ಲಾ ಮತದವರು ಈ ವಿಧಾನದಿಂದಲೇ ತಂದೆ ಆದ ದೇವರ ಹತ್ತಿರ ಸೇರಬೇಕೆಂದು ತಿಳಿಸುತ್ತಿದ್ದೇವೆ.
**ಓಂ ಮಾತಾಪಿತಾಯ ನಮಃ**

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕು ಶಾಸ್ತ್ರ ಅಷ್ಟೆ ಅಗತ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

**ನಿನ್ನ ತಾಯಿ ಯಾರೋ ನಿನಗೆ ತಿಳಿದರೆ ನಿನ್ನ ತಂದೆ ತಿಳಿಯುವನು**
**ನಿನ್ನ ತಂದೆ ಯಾರೋ ನಿನಗೆ ತಿಳಿದರೆ ನಿನ್ನ ಗಮ್ಯ ತಿಳಿಯುವುದು.**

